

ಕರ್ನಾಟಕ ಸರ್ಕಾರ

# ಸಾಮಾಜಿಕ ವಿಷಯಗಳ ತರಬೇತಿ ಕೈಪಿಡಿ



ಸ್ತ್ರೀಶಕ್ತಿ



ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು

# ಸಾಮಾಜಿಕ ವಿಷಯಗಳ ತರಬೇತಿ ಕೈಪಿಡಿ



## ಸ್ತ್ರೀಶಕ್ತಿ



ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು

# ಸಂದೇಶ



ಸ್ತ್ರೀಶಕ್ತಿ ಯೋಜನೆಯು ರಾಜ್ಯದಲ್ಲಿ ಅನುಷ್ಠಾನಗೊಂಡು ಎರಡು ವರ್ಷ ಕಳೆದಿದೆ, ಎರಡು ವರ್ಷದ ಅವಧಿಯಲ್ಲಿ ಗ್ರಾಮೀಣ ಮಹಿಳೆಯರಲ್ಲಿ ಸಾಮಾಜಿಕ ಜಾಗೃತಿ ಮತ್ತು ಅನಿಷ್ಟ ಪದ್ಧತಿಗಳ ನಿರ್ಮೂಲನೆ ಬಗ್ಗೆ ಅರಿವು ಮೂಡುತ್ತಿದೆ. ಈ ಮಹಿಳೆಯರಲ್ಲಿ ಉಳಿತಾಯ ಮನೋಭಾವದ ಜೊತೆಗೆ ಸಾಮಾಜಿಕ ವಿಷಯಗಳ ಬಗ್ಗೆ ತಿಳುವಳಿಕೆಯನ್ನು ಸಹ ನೀಡಬೇಕಾಗಿದೆ. ಆದ್ದರಿಂದ ಹಂತ ಹಂತವಾಗಿ ಸ್ತ್ರೀಶಕ್ತಿ ಗುಂಪುಗಳ ಉನ್ನತಿಗಾಗಿ ಮತ್ತು ಅಭ್ಯುದಯಕ್ಕಾಗಿ ತರಬೇತಿಯನ್ನು ನೀಡುವುದು ಅತೀ ಅವಶ್ಯಕವಾಗಿದೆ.

ಸ್ತ್ರೀಶಕ್ತಿ ಗುಂಪಿನ ಮಹಿಳೆಯರ ಸಾಮಾಜಿಕ ಪ್ರಗತಿಯನ್ನು ಸಾಧಿಸುವುದಕ್ಕೆ ಪ್ರಗತಿ ಪಥದ ಮೊದಲನೇಯ ಹಂತವಾದ ಸಾಮಾಜಿಕ ವಿಷಯಗಳ ಮಹತ್ವವನ್ನು ಅರಿತುಕೊಳ್ಳಬೇಕಾಗಿದೆ. ಮುಖ್ಯವಾಗಿ ಲಿಂಗತಾರತಮ್ಯ, ಕುಟುಂಬದಲ್ಲಿ ಹಿಂಸೆ ಮತ್ತು ವರದಕ್ಷಿಣೆಯಂತಹ ಸಾಮಾಜಿಕ ಪಿಡುಗುಗಳನ್ನು ಸಮಾಜದಿಂದ ಹೋಗಲಾಡಿಸಲು ಮಹಿಳೆಯರು ಕಂಕಣಬದ್ಧರಾಗಿ ಹೋರಾಡಬೇಕಾಗಿದೆ.

ಮಹಿಳೆ ಸಾಮಾನ್ಯವಾಗಿ ಮನೆಯಲ್ಲಿ, ಕುಟುಂಬದಲ್ಲಿ, ಸಮಾಜದಲ್ಲಿ ಉದ್ಯೋಗ ಮಾಡುವ ಕಡೆಯಲ್ಲಿ, ಶಾಲೆಗಳಲ್ಲಿ, ವಿದ್ಯಾರ್ಥಿನಿಲಯಗಳಲ್ಲಿ, ರೈಲು ಮತ್ತು ಬಸ್ಸಿನ ಪ್ರಯಾಣದಲ್ಲಿ, ಸಿನಿಮಾ ಮಂದಿರದಲ್ಲಿ ಇನ್ನೂ ಮುಂತಾದ ಸಂದರ್ಭಗಳಲ್ಲಿ ಕೆಲವೊಮ್ಮೆ ಹಿಂಸೆಯನ್ನು ಅನುಭವಿಸುತ್ತಾಳೆ. ಇಂದು ಈ ಎಲ್ಲಾ ಹಿಂಸೆಗಳಿಗೆ ಧ್ವನಿಯೆತ್ತಬೇಕಾಗಿದೆ ಮತ್ತು ಪರಿಹಾರ ಕಂಡುಕೊಳ್ಳುವಲ್ಲಿ ತಾನೇ ಯೋಚಿಸಬೇಕಾಗಿದೆ. ಈ ಕೈಪಿಡಿಯಲ್ಲಿರುವ ಮಾಹಿತಿ, ಮಹಿಳೆಯರನ್ನು ಚುರುಕುಗೊಳಿಸಿ, ಸಾಮಾಜಿಕ ಆಂದೋಲನ ಪ್ರಾರಂಭಿಸಲು ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ದಾರಿದೀಪವಾಗಲಿ ಎಂದು ಹಾರೈಸುವೆನು. ಈ ಯೋಜನೆಯ ಕಕ್ಷೆಯಲ್ಲಿ ಬರುವ 11 ಲಕ್ಷ ಮಹಿಳೆಯರು ಈ ಕೈಪಿಡಿಯ ಉಪಯೋಗ ಮತ್ತು ಮಾರ್ಗದರ್ಶನ ಪಡೆದುಕೊಂಡಲ್ಲಿ ಈ ಹೊತ್ತಿಗೆ ಪ್ರಕಟಣೆಯಾದುದಕ್ಕೆ ಸಾರ್ಥಕವಾಗುತ್ತದೆ.

ಸ್ತ್ರೀಶಕ್ತಿ ಗುಂಪಿನ ಮಹಿಳೆಯರು ಈ ಯೋಜನೆಯಿಂದ ಸಶಕ್ತರಾಗಲಿ, ಸಬಲೀಕರಣದತ್ತ ದಾಪುಗಾಲಿಡಲಿ ಎಂದು ಹಾರೈಸುತ್ತೇನೆ.

**(ಶ್ರೀಮತಿ ಮೋಟಮ್ಮ)**
**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರು**
**ಕರ್ನಾಟಕ ಸರ್ಕಾರ, ಬೆಂಗಳೂರು.**

# ಸಂದೇಶ

ಸಾಮಾಜಿಕ ಪ್ರಜ್ಞೆ ಪ್ರತಿಯೊಬ್ಬರಲ್ಲಿ ಇರಬೇಕಾಗುತ್ತದೆ. ಮಾನವನು ಸಮಾಜಜೀವಿ. ಸಂಘ ಜೀವಿಯಾಗಿ ಈ ಸಮಾಜದಲ್ಲಿ ಬಾಳಬೇಕಾಗುತ್ತದೆ. ಈ ಸಾಮಾಜಿಕ ಪ್ರಜ್ಞೆ ಏನ್ನುವುದು ಬಹು ದೊಡ್ಡ ವಿಷಯವಾಗಿದೆ. ಇದನ್ನು ಬೇರೆಯವರಿಂದ ನೋಡಿ, ಕೇಳಿ ಮತ್ತು ಅನುಕರಣೆ ಮಾಡಿ ಕಲಿಯಬಹುದಾಗಿದೆ. ಸಾಮಾಜಿಕ ಪ್ರಜ್ಞೆಯನ್ನು ಮಹಿಳೆಯರಲ್ಲಿ ಮೂಡಿಸುವುದು ಸರಕಾರದ ಮತ್ತು ಸಮಾಜದ ಕರ್ತವ್ಯವಾಗಿದೆ.

ಸ್ತ್ರೀಶಕ್ತಿ ಯೋಜನೆಯು ಕರ್ನಾಟಕದಲ್ಲಿ ಪ್ರಾರಂಭವಾಗಿ ಎರಡು ವರ್ಷಗಳು ಪೂರ್ಣವಾಗಿದ್ದು, ಹಂತ ಹಂತವಾಗಿ ಗುಂಪಿನ ಸದಸ್ಯರಿಗೆ ರಚನೆ ಮತ್ತು ಆರ್ಥಿಕ ರಂಗದಲ್ಲಿ ತರಬೇತಿ ಮತ್ತು ಮಾಹಿತಿಯನ್ನು ನೀಡಲಾಗುತ್ತಿದೆ. ಸ್ತ್ರೀಯರ ಇಚ್ಛಾಶಕ್ತಿಯಿಂದಲೇ ಕರ್ನಾಟಕದಲ್ಲಿ 75000 ಗುಂಪುಗಳನ್ನು ರಚನೆ ಮಾಡಿ, 11 ಲಕ್ಷದಷ್ಟು ಮಹಿಳೆಯರು ಸದಸ್ಯರಾಗಿರುವುದು ಯೋಜನೆಯ ದಿಕ್ಸೂಚಿಯಾಗಿದೆ. ಈ ಎರಡು ವರ್ಷದ ಅವಧಿಯಲ್ಲಿ ಗುಂಪಿನ ಮಹಿಳೆಯರು ಸುಮಾರು 90.00 ಕೋಟಿ ರೂಪಾಯಿಗಳ ಉಳಿತಾಯ ಮಾಡಿದ್ದಾರೆ.

ನಮ್ಮ ದೇಶದಲ್ಲಿ ಮೊದಲಿನಿಂದಲೂ ಹೆಣ್ಣಿಗೆ ಪ್ರಮುಖ ಸ್ಥಾನವಿದೆ. ಅದರ ಜೊತೆಗೆ ಹೆಣ್ಣಿಗೆ ಅನೇಕ ಕಟ್ಟುಪಾಡುಗಳನ್ನು ಹಾಕುತ್ತಾ ಬಂದಿರುವುದು ಕೂಡ ಸಾಮಾಜಿಕ ಅನಿಷ್ಟವಾಗಿದೆ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ರಾಜ್ಯಾದ್ಯಂತ ಸ್ತ್ರೀಶಕ್ತಿ ಯೋಜನೆಯನ್ನು ಜಾರಿಗೊಳಿಸಿರುವುದು ಬಹಳ ಪ್ರಶಂಸನೀಯ ಕಾರ್ಯವಾಗಿದೆ. ಸ್ತ್ರೀಶಕ್ತಿ ಯೋಜನೆಯ ಗುಂಪುಗಳ ರಚನೆಯಾಗಿ ಅಸ್ತಿತ್ವದಲ್ಲಿ ಇದ್ದರೂ ಸಹ ಅವುಗಳಿಗೆ ಸಾಮಾಜಿಕ ಸ್ವರೂಪವನ್ನು ಕೊಡಬೇಕಾಗಿದೆ.

ಈ ಹಂತದಲ್ಲಿ ಸಾಮಾಜಿಕ ವಿಷಯಗಳ ಕುರಿತು ತರಬೇತಿ ಕೈಪಿಡಿಯನ್ನು ಹೊರತರುವುದು ಅವಶ್ಯಕತೆಯಿದೆ. ಈ ಕೈಪಿಡಿಯಲ್ಲಿ ತರಬೇತುದಾರರಿಗೆ ಟಿಪ್ಪಣಿ, ಹಾಡುಗಳು, ನಾಟಕಗಳು, ಘೋಷಣೆಗಳು ಮತ್ತು ಸಾಮಾಜಿಕ ವಿಷಯಗಳನ್ನೊಳಗೊಂಡ ಪಠ್ಯಕ್ರಮ ಲಭ್ಯವಿರುತ್ತದೆ. ಇದರ ಉಪಯೋಗವನ್ನು ಗುಂಪಿನ ಸದಸ್ಯರು ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಾರ್ವಜನಿಕರು ಪಡೆದುಕೊಳ್ಳಬೇಕಾಗಿದೆ. ಸಾಮಾಜಿಕ ವಿಷಯಗಳ ತರಬೇತಿ ಉಳಿದ ತರಬೇತಿಗಿಂತ ವಿಭಿನ್ನವಾಗಿದೆ. ಜಿಲ್ಲೆಯ ಸಾಕ್ಷರತಾ ತಂಡದವರಿಂದ ಕಲಾ ಮೇಳ, ಜಾಗೃತಿ ಮೇಳಗಳನ್ನು ಹಾಡು ನಾಟಕಗಳ ಮೂಲಕ ಮಹಿಳೆಯರಲ್ಲಿ ಅರಿವು ಮೂಡಿಸುವುದಾಗಿದೆ.

ಕರ್ನಾಟಕ ಸರಕಾರ ಮಹಿಳೆಯರ ಸಾಮಾಜಿಕ ಸಮಸ್ಯೆಗಳನ್ನು ಸಮರ್ಪಕವಾಗಿ ಎದುರಿಸಲು ಹಲವಾರು ಯೋಜನೆಗಳನ್ನು ಹಾಕಿಕೊಂಡಿರುತ್ತದೆ. ಈ ಕೈಪಿಡಿಯ ಮತ್ತು ಯೋಜನೆಗಳ ಉಪಯೋಗ ಪಡೆದುಕೊಂಡು ಸದೃಢರಾಗಬೇಕೆಂದು ಮತ್ತು ಸಬಲೀಕರಣದತ್ತ ದಾಪುಗಾಲು ಇಡಬೇಕೆಂದು ಹಾರೈಸುತ್ತೇನೆ.

ಡಿ. ತಂಗರಾಜ್
ಕಾರ್ಯದರ್ಶಿಗಳು
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.

# ಮುನ್ನುಡಿ

ರಾಷ್ಟ್ರದಲ್ಲಿ ಗ್ರಾಮಗಳ ಅಭಿವೃದ್ಧಿಯನ್ನು ಸಾಧಿಸಲು ಸ್ವಸಹಾಯ ಗುಂಪುಗಳು ಮಹತ್ವವಾದ ಪಾತ್ರವನ್ನು ವಹಿಸುತ್ತವೆ. ಸ್ತ್ರೀಶಕ್ತಿ ಯೋಜನೆಯು ಗ್ರಾಮೀಣ ಮಹಿಳೆಯರ ಸರ್ವತೋಮುಖ ಅಭಿವೃದ್ಧಿಯನ್ನು ಹಮ್ಮಿಕ್ಕೊಂಡಿದೆ. ಮಹಿಳೆಯರ ಆತ್ಮವಿಶ್ವಾಸವನ್ನು ಹೆಚ್ಚಿಸಬೇಕಾದರೆ ಸಾಮಾಜಿಕ ಅರಿವು ಬಹಳ ಪ್ರಾಮುಖ್ಯ. ಸಮಾಜದಲ್ಲಿ ಪ್ರತಿಯೊಬ್ಬ ಮಹಿಳೆಯು ಸಂಘಜೀವಿಯಾಗಿ ಬದುಕಬೇಕಾಗುತ್ತದೆ.

ಸಮಾಜದಲ್ಲಿ ಸಾಮಾಜಿಕ ಪಿಡುಗುಗಳು ಹಾಗೂ ಮೂಢ ನಂಬಿಕೆಗಳು ಇವತ್ತಿನವರೆಗೂ ಪ್ರಚಲಿತವಾಗಿರುತ್ತವೆ. ಅವುಗಳನ್ನು ಬದಿಗೊತ್ತಿ ಪುರುಷ ಪ್ರಧಾನವಾದ ಈ ಸಮಾಜದಲ್ಲಿ ಮಹಿಳೆ ಶಕ್ತಿವಂತಳಾಗಬೇಕಾದರೆ ಸಾಮಾಜಿಕ ಪ್ರಜ್ಞೆ ಮತ್ತು ಸಾಮಾಜಿಕ ಮಾಹಿತಿ ಬೇಕಾಗುತ್ತದೆ. ಈ ಸನ್ನಿವೇಶದಲ್ಲಿ 'ಸಾಮಾಜಿಕ ವಿಷಯಗಳ ತರಬೇತಿ ಕೈಪಿಡಿ' ಅತೀ ಅವಶ್ಯವಾಗಿದೆ. ಮುಖ್ಯವಾಗಿ ಲಿಂಗ ತಾರತಮ್ಯ, ಕುಟುಂಬದಲ್ಲಿ ಹಿಂಸೆ ಮತ್ತು ವರದಕ್ಷಿಣೆಯಂತಹ ಸಾಮಾಜಿಕ ಪಿಡುಗುಗಳನ್ನು ಸಮಾಜದಿಂದ ಹೋಗಲಾಡಿಸಲು ಎಲ್ಲ ಮಹಿಳೆಯರು ಅದರಲ್ಲಿಯೂ ಸ್ವಸಹಾಯ ಗುಂಪಿನ ಮಹಿಳೆಯರು ಕಂಕಣಬದ್ಧರಾಗಬೇಕು ಮತ್ತು ಒಗ್ಗಟ್ಟಿನಿಂದ ಹೋರಾಟ ಮಾಡಬೇಕು. ಈ ಹೋರಾಟ ಕೇವಲ ಸಂಭಾಷಣೆಯಿಂದ ಬರುವುದಿಲ್ಲ ಅದಕ್ಕೆ ಮಹಿಳೆಯರಿಗೆ ತರಬೇತಿ ಬೇಕು, ಸಾಮಾಜಿಕ ಶಿಕ್ಷಣದ ಅರಿವು ಅವರಲ್ಲಿ ಬರಬೇಕು. ಈ ಜಾಗೃತಿ ಬರಬೇಕಾದರೆ ಮಹಿಳೆಯರಿಗೆ ಗ್ರಾಮಮಟ್ಟದಲ್ಲಿ "ಸಾಮಾಜಿಕ ಅರಿವು ಜಾಗೃತ ಮೇಳ " ಗಳನ್ನು ಹಮ್ಮಿಕ್ಕೊಳ್ಳಬೇಕಾಗುತ್ತದೆ. ಈ ಅರಿವು ಜಾಗೃತ ಮೇಳ ನುರಿತ ಮತ್ತು ಅನುಭವಿ ಕಲಾತಂಡದವರಿಂದ ಬೀದಿ ನಾಟಕ, ಕಲಾ ಪ್ರದರ್ಶನ, ಘೋಷಣೆ ಮುಂತಾದವುಗಳಿಂದ ಮೂಡಿಸಬಹುದಾಗಿದೆ. ಈ ಸಾಮಾಜಿಕ ಮೇಳಗಳಿಗೆ 'ಪಠ್ಯಕ್ರಮ' ಅತ್ಯವಶ್ಯವಾಗಿದೆ. ಆದುದರಿಂದಲೇ ಈ ಪಠ್ಯಕ್ರಮವನ್ನೊಳಗೊಂಡ ಕೈಪಿಡಿಯನ್ನು ಹೊರತರಲಾಗಿದೆ. ಈ ಕೈಪಿಡಿಯಲ್ಲಿ ಸಾಮಾಜಿಕ ಸಮಸ್ಯೆಗಳ ವಿಶ್ಲೇಷಣೆ, ಪರಿಹಾರ ಮತ್ತು ಸಾಮಾಜಿಕ ಅಭಿವೃದ್ಧಿಯ ವಿಷಯಗಳನ್ನೊಳ ಗೊಂಡಿರುವುದು ಶ್ಲಾಘನೀಯ. ಹಾಡುಗಳ, ನಾಟಕಗಳ, ಘೋಷಣೆಗಳ, ಸಂಭಾಷಣೆಗಳ ಮತ್ತು ಭಿತ್ತಿ ಪತ್ರಗಳ ಮೂಲಕ ಮಹಿಳೆಯರ ಮನಕರಗುವಂತೆ ಸಮಾಜದ ಪರಿವರ್ತನೆ ಮಾಡುವುದೇ ಸಾಮಾಜಿಕ ವಿಷಯಗಳ ಕೈಪಿಡಿಯ ಮೂಲ ಉದ್ದೇಶವಾಗಿದೆ.

ಈ ಕೈಪಿಡಿಯಿಂದ ಸ್ತ್ರೀಶಕ್ತಿ ಯೋಜನೆಯ ಮೂಲ ಉದ್ದೇಶವನ್ನು ಗ್ರಾಮದ ಮೂಲೆ ಮೂಲೆಗೆ ತಲುಪುವಂತೆ ಮಾಡುವುದೇ ಇದರ ಗುರಿಯಾಗಿದೆ. ಮಹಿಳೆಯರಲ್ಲಿ ಸಾಮಾಜಿಕ ಪ್ರಜ್ಞೆ ಮೂಡಲಿ ಎಂದು ಹಾರೈಸುತ್ತೇನೆ.

ಈ ಕೈಪಿಡಿಯನ್ನು ಹೊರತರಲು ಸಹಕರಿಸಿದ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಸ್ವಶಕ್ತಿ, ಲೋಕಶಿಕ್ಷಣ ಇಲಾಖೆ, ಕರ್ನಾಟಕ ಮಹಿಳಾ ಆಯೋಗ, ಮಹಿಳಾ ಸಾಮುಕ್ಯ ಮತ್ತು ಮೈರಾಡ ಸಂಸ್ಥೆಗಳಿಗೆ ಕೃತಜ್ಞತೆಗಳನ್ನು ಈ ಸಂದರ್ಭದಲ್ಲಿ ಸಲ್ಲಿಸುತ್ತಿದ್ದೇನೆ. ಜಾಗೃತರಾಗಿ ಸ್ತ್ರೀಶಕ್ತಿ ಗುಂಪಿನ ಮಹಿಲೆಯರು ಈ ಯೋಜನೆಯಿಂದ, ತರಬೇತಿಯಿಂದ ಜಾಗೃತರಾಗಿ ಸಾಮಾಜಿಕವಾಗಿ ಸಶಕ್ತರಾಗಿ ಸಬಲೀಕರಣದತ್ತ ದಾಪುಗಾಲಿಡಲಿ ಎಂದು ಹಾರೈಸುತ್ತೇನೆ.

ಬಿ.ಆರ್. ಜಯರಾಮರಾಜಅರಸ್
ನಿರ್ದೇಶಕರು
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು

## ಸಮಿತಿ ಸದಸ್ಯರು

1) ಆರ್.ಕೆ. ರಾಜು KAS
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ

2) ಶ್ರೀಮತಿ ಜಿ. ಸತ್ಯವತಿ KAS ಸ್ಪೆಷಲ್ ಆಫಿಸರ್
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

3) ಶ್ರೀಮತಿ ಡಾ॥ ವಿಜಯಲಕ್ಷ್ಮೀ
ಯೋಜನಾ ನಿರ್ದೇಶಕರು, ಸ್ವಶಕ್ತಿ ಪ್ರಾಜೆಕ್ಟ್

4) ಶ್ರೀಮತಿ ವಾಸಂತಿ ಕೆ.ಆರ್.
ಟ್ರೈನಿಂಗ್ ಕೋ ಆರ್ಡಿನೇಟರ್, ಸ್ವಶಕ್ತಿ ಪ್ರಾಜೆಕ್ಟ್

5) ಶ್ರೀಮತಿ ಎಂ.ಎಂ. ಬಿಂದು
ಉಪಯೋಜನಾ ನಿರ್ದೇಶಕರು
ಸ್ತ್ರೀಶಕ್ತಿ ಶಾಖೆ, ಪ್ರಧಾನ ಕಛೇರಿ

6) ಶ್ರೀಮತಿ ವಿದ್ಯಾರಾಮಚಂದ್ರನ್
ಮೈರಾಡ ಸ್ವಯಂ ಸೇವಾ ಸಂಸ್ಥೆ

7) ಶ್ರೀಮತಿ ಆಶಾ ನಂಬೀಶನ್
ಬೆಂಗಳೂರು

8) ಶ್ರೀ ಸಂಜೀವ್ ಕುಲಕರ್ಣಿ
ರವೀಂದ್ರ ಕಲಾನಿಕೇತನ
ತುಮಕೂರು

9) ಶ್ರೀ ಪ್ರವೀಣ್
ಕಾರ್ಟೂನಿಸ್ಟ್, ಬೆಂಗಳೂರು

10) ಶ್ರೀಮತಿ ನಗೀನಾ
ಮಹಿಳಾ ಸಾಮುಖ್ಯ

11) ಶ್ರೀಮತಿ ಕವಿತಾ ಡಿ.ಎಲ್
ಮಹಿಳಾ ಸಮುಖ್ಯ

12) ಶ್ರೀಮತಿ ಪ್ರತಿಭಾ ನಂದಕುಮಾರ್
ಬರಹಗಾರರು

13) ಇಕ್ಬಾಲ್ ಅಹಮದ್
ಜೆ.ಪಿ.ನಗರ, ಬೆಂಗಳೂರು

14) ಶ್ರೀಮತಿ ಶಾಂತಮ್ಮ
ಕರ್ನಾಟಕ ಮಹಿಳಾ ಆಯೋಗ, ಬೆಂಗಳೂರು.

ಎಂ.ಓ. ನಾಗರಾಜ್ KAS
ಯೋಜನಾ ನಿರ್ದೇಶಕರು, ಸ್ತ್ರೀಶಕ್ತಿ ಯೋಜನೆ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,
ಬೆಂಗಳೂರು

ಬಿ.ಆರ್. ಜಯರಾಮರಾಜಅರಸ್ IAS
ನಿರ್ದೇಶಕರು,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,
ಬೆಂಗಳೂರು

# ಪರಿವಿಡಿ

ಪುಟ ಸಂಖ್ಯೆ

## ತರಬೇತುದಾರರಿಗೆ ಒಂದು ಟಿಪ್ಪಣಿ

ತರಬೇತುದಾರರಾಗುವ ನಿಮಗೆ ತರಬೇತಿಯ ತಯಾರಿ ಬಹಳ ಮುಖ್ಯವೆನಿಸುತ್ತದೆ. ಯಾವುದೇ ವಿಷಯಗಳನ್ನು ನೀವು ತರಬೇತುದಾರರಿಗೆ ಹೇಳುವಾಗ ಆ ವಿಷಯದಲ್ಲಿ ನೀವು ಸ್ವಲ್ಪ ಮಟ್ಟಿಗೆ ಪರಿಣಿತಿಯನ್ನು ಹೊಂದಿರಬೇಕಾಗುತ್ತದೆ. ಅದ್ದಕ್ಕಾಗಿಯೇ ಈ ಟಿಪ್ಪಣಿಯ ಜೊತೆ ಸಮಸ್ಯೆಗಳ ಪರಿಚಯುವನ್ನು ಕೊಡಲಾಗಿದೆ.ನಿಮಗೆ ಗೊತ್ತಿರುವುದನ್ನು ಇತರರೊಡನೆ ಹಂಚಿ, ನಿಮಗೆ ಗೊತ್ತಿಲ್ಲದ ವಿಷಯುಗಳನ್ನು ಬೇರೆಯವರಿಂದ ತಿಳಿದುಕೊಳ್ಳುವ ಒಂದು ಸಂಯಮ ಬೆಳಸಿಕೊಳ್ಳಿ. ಇದರಿಂದ ನಿಮಗೆ ಬಹಳ ಲಾಭವಿದೆ. ಹೊಸ ಹೊಸ ಕಲಿಕೆ ಆಗುತ್ತದೆ. ಅಶಾಂತಿಯಿಂದ ಕೂಡಿದ ಮತ್ತು ಅಸಮಾನವಾದ ಈ ಸಮಾಜವನ್ನು ಸುಂದರವಾದ ಸಮಾಜವನ್ನಾಗಿ ಮಾಡಲು ನಡೆಸಿರುವ ಹೋರಾಟದಲ್ಲಿ ನೀವು ಬಹಳ ಮುಖ್ಯಪಾತ್ರ ವಹಿಸಿರುವಿರಿ. ಗ್ರಾಮಾಂತರ ಹೆಣ್ಣು ಮಕ್ಕಳಿಗೆ ನೀವು ಕೇಂದ್ರ ಬಿಂದು ಆಗುತ್ತೀರಿ ಮತ್ತು ಅವಳ ಬಾಳಿನ ಪಥದಲ್ಲಿ ನಿರ್ದಿಷ್ಟ ಬದಲಾವಣೆಗಳನ್ನು ತರುವ ಒಂದು ಬೆಳಗುವ ದೀಪವಾಗುತ್ತೀರಿ. ಈ ನಿಟ್ಟಿನಲ್ಲಿ ನಮ್ಮ ಗ್ರಾಮಾಂತರ ಹೆಣ್ಣು ಮಕ್ಕಳಿಗೆ ಸಾಮಾಜಿಕ ಸಮಸ್ಯೆಗಳು / ಪಿಡುಗುಗಳ ಮೇಲೆ ಅರಿವು ಮೂಡಿಸಬೇಕಾಗಿದೆ. ಈ ಎಲ್ಲಾ ಮಾಹಿತಿಗಳು ಪರಿಣಾಮಕಾರಿಯಾಗಿ ತಲುಪಲು ಮೂರು ಮಾಧ್ಯಮಗಳನ್ನು ಬಳಸಲಾಗಿದೆ - ಹಾಡುಗಳು, ಪೋಸ್ಟರ್ಸ್ (ಬಿತ್ತಿ ಪತ್ರಗಳು) ಮತ್ತು ಬೀದಿ ನಾಟಕಗಳ ಆತ್ಮ ವಿಶ್ವಾಸ ಮತ್ತು ನಂಬಿಕೆಯಿಂದ, ಶೋಷಿತ ಹೆಣ್ಣು ಮಕ್ಕಳ ಒಳಿತಿಗಾಗಿ, ಇವುಗಳ ಮೇಲೆ ಮಾಹಿತಿ ಪಡೆದು ಅವರಿಗೂ ಸಹಾ ಮಾಹಿತಿ ನೀಡಿರಿ.

## ಸಮಸ್ಯೆಗಳ ಒಂದು ಕಿರು ಪರಿಚಯ

ಅನಾದಿ ಕಾಲದಿಂದಲೂ ನಮ್ಮ ದೇಶದಲ್ಲಿ ಹೆಣ್ಣಿಗೆ ಪ್ರಮುಖ ಸ್ಥಾನವಿದೆ. ಹಿಂದೆ ನಮ್ಮ ಸಮಾಜ 'ಮಾತೃ' ಪ್ರಧಾನವಾಗಿತ್ತು. ಕಾಲಾಂತರದಲ್ಲಿ ಅದು 'ಪಿತೃ' ಪ್ರಧಾನ ಸಮಾಜವಾಗಿ ಮಾರ್ಪಾಟಾಯಿತು. ಹೀಗೆ ಬದಲಾದ ಸಮಾಜದಲ್ಲಿ ಹೆಣ್ಣಿಗೆ ನಾನಾ ರೀತಿಯ ಕಟ್ಟು ಪಾಡುಗಳನ್ನು ಹಾಕಲಾಯಿತು. ಅದರ ಪರಿಣಾಮವಾಗಿ ಅವಳು 'ಅಬಲೆ' ಎನ್ನುವ ಹೆಸರಿನಲ್ಲಿ ನಾನಾ ರೀತಿಯ ಶೋಷಣೆ ಮತ್ತು ಸಮಸ್ಯೆಗಳಿಗೆ ಒಳಗಾಗಿದ್ದಾಳೆ. ಅವುಗಳಲ್ಲಿ ಪ್ರಮುಖವಾದವು ಲಿಂಗ ತಾರತಮ್ಯ, ಕುಟುಂಬದಲ್ಲಿ ಹಿಂಸೆ ಮತ್ತು ವರದಕ್ಷಿಣೆ, ಅಂತೆಯೆ ಈ ಮೂರು ವಿಷಯಗಳನ್ನು ತರಬೇತಿಯಲ್ಲಿ ಸೇರಿಸಿಕೊಳ್ಳಲಾಗಿದೆ.

### 1. ಲಿಂಗ ತಾರತಮ್ಯ

ಹೆಣ್ಣು ಮತ್ತು ಗಂಡಿನ ನಡುವಿನ ಭೇದ ದೈಹಿಕವಾದದ್ದು ಮಾತ್ರ. ಹೆಣ್ಣಿನಂತೆ ಗಂಡು ಗರ್ಭಧರಿಸಲಾರ ಮತ್ತು ಹೆಣ್ಣು ಲಿಂಗಧಾರಣೆಯಲ್ಲಿ ದೈಹಿಕವಾಗಿ ಗಂಡಿನ ಪಾತ್ರ ನಿರ್ವಹಿಸಲಾರಳು. ಸಮಾಜ ಕೆಲವು ಕಟ್ಟು ಪಾಡುಗಳನ್ನು ಹಾಕಿಕೊಂಡಿದೆ. ಅದರಂತೆ ಹೆಣ್ಣಿನ ಕೆಲಸ ಮಾಡುವ ಗಂಡನು ಅಥವಾ ಗಂಡಿನ ಕೆಲಸ ಮಾಡುವ ಹೆಣ್ಣನ್ನು ಅದು ಒಪ್ಪುವುದಿಲ್ಲ. ಇದನ್ನೇ ಅಸಮಾನತೆ ಎನ್ನುತ್ತಾರೆ ಅಥವಾ ಲಿಂಗತಾರತಮ್ಯ ಎನ್ನುತ್ತಾರೆ. ಲಿಂಗತಾರತಮ್ಯ ಎಂಬುದು ಸ್ತ್ರೀಪುರುಷರ ಸಾಮಾಜಿಕ ಬಿನ್ನತೆಯನ್ನು ವಿವರಿಸುವ ಒಂದು ಪದ. ಲಿಂಗ ತಾರತಮ್ಯ ಜೈವಿಕ ಭಿನ್ನತೆಯನ್ನು ಸೂಚಿಸುತ್ತದೆ. ಲಿಂಗ ತಾರತಮ್ಯ ಸಮಾಜದಿಂದ ಸೃಷ್ಟಿಸಲ್ಪಟ್ಟಿದೇ ವಿನಃ ಅದು ಸ್ವಾಭಾವಿಕ ಅಥವಾ ಭೌತಿಕವಲ್ಲ. ಲಿಂಗತಾರತಮ್ಯ ವಿರುವುದು ಅವರು ನಿರ್ವಹಿಸುವ ಪಾತ್ರಗಳಲ್ಲಿ ಮಾತ್ರ.

ಹೆಣ್ಣು ಹುಟ್ಟಿದಾಗಿನಿಂದ ಹಿಡಿದು ಅವಳ ವೃದ್ಯಾಪದವರೆಗೂ ಬೇರೆ ಬೇರೆ ಸಂದರ್ಭದಲ್ಲಿ ಹಾಗೂ ಬೇರೆ ಬೇರೆ ರೀತಿಯಲ್ಲಿ ಲಿಂಗ ತಾರತಮ್ಯಕ್ಕೆ ಒಳಗಾಗುತ್ತಾಳೆ. ಈ ತಾರತಮ್ಯ ಸ್ವರೂಪ ಬೇರೆ ಬೇರೆ ಪ್ರದೇಶಗಳಿಗೆ ಮತ್ತು ಸಮುದಾಯಕ್ಕೆ ಕಾಲ ಕಾಲಕ್ಕೆ ಬದಲಾಗುತ್ತಲೇ ಇರುತ್ತದೆ. ಹೆಣ್ಣು ಮಕ್ಕಳು ಮುಖ್ಯವಾಗಿ ಶಿಕ್ಷಣ, ಆಹಾರ, ಚಲನಶೀಲತೆ ಮುಂತಾದ ವಿಷಯಗಳಲ್ಲಿ ಹೆಚ್ಚು ತಾರತಮ್ಯಕ್ಕೆ ಒಳಗಾಗುತ್ತಾಳೆ. (ಹೀಗೇಕೆ ? ಹೀಗೀರಲಿ-ಎಂಬ ಶೀರ್ಷಿಕೆಯಲ್ಲಿ ಲಿಂಗ ತಾರತಮ್ಯ ಸಾಮಾನ್ಯವಾಗಿ ವಾಸ್ತವವಾಗಿ ಯಾವ ಯಾವ ಸಂದರ್ಭದಲ್ಲಿ ಕಾಣಿಸಿಕೊಳ್ಳುತ್ತದೆ ಮತ್ತು ಅದನ್ನು ಹೇಗೆ ಬದಲಾಯಿಸಬೇಕು ಎಂಬುದನ್ನು ತಮಗೆ ನೀಡಿರುವ ಬಿತ್ತಿ ಪತ್ರಗಳಲ್ಲಿ ತೋರಿಸಲಾಗಿದೆ).

2. ಕುಟುಂಬದಲ್ಲಿ ಹಿಂಸೆ

ಗಂಡಸು ಹಿಂಸೆ ಕೊಡುವುದು ಮತ್ತು ಮಹಿಳೆ ಅದರ ವಿರುದ್ಧ ಧ್ವನಿ ಎತ್ತದೆ ಒಪ್ಪಿಕೊಂಡಿರುವುದು ಒಂದು ಸಾಮಾಜಿಕ ಸಮಸ್ಯೆಯಾಗಿದೆ. ಇದರಿಂದ ಅವಳ ವ್ಯಕ್ತಿತ್ವ ಕುಂದುತ್ತದೆ, ಇದನ್ನು ಒಪ್ಪಿಕೊಳ್ಳುವುದನ್ನು ತಂದೆ ತಾಯಿಗಳು ಸಣ್ಣ ವಯಸ್ಸಿನಿಂದಲೇ ಕಲಿಸುತ್ತಾರೆ.

ಉದಾ :- "ನೀನು ಹೆಣ್ಣು ಹುಡುಗಿ, ಹಾಗೆಲ್ಲ ಗಂಡು ಮಕ್ಕಳಿಗೆ ಎದುರು ಮಾತನಾಡಬಾರದು" ಹಾಗಾಗಿ ಮುಂದೆಯೂ ಕೂಡ ಅವಳ ಮೇಲೆ ಹಿಂಸೆ ನಡೆದಾಗ ಅದನ್ನು ಕೂಡ ಸಹಜ ಎಂಬಂತೆ ಒಪ್ಪಿಕೊಳ್ಳುತ್ತಾಳೆ. ಅದನ್ನು ತನ್ನ ಮೇಲೆ ಆಗುತ್ತಿರುವ ಹಿಂಸೆ ಎಂದು ಕೂಡಾ ಗುರುತಿಸುವುದಿಲ್ಲ. ಬೇರೆಯವರಂತೆ ತಾನು ಇರಬೇಕು, ಇಲ್ಲದಿದ್ದರೆ ಸಮಾಜ ತನ್ನನ್ನು ಕೆಟ್ಟ ದೃಷ್ಟಿಯಿಂದ ನೋಡುತ್ತದೆ ಎಂದು ಭಾವಿಸಿ ಸುಮ್ಮನಾಗುತ್ತಾಳೆ. ಹೆಣ್ಣು ಸಾಮಾನ್ಯವಾಗಿ ಎಲ್ಲೆಲ್ಲಿ ಹಿಂಸೆ ಅನುಭವಿಸುತ್ತಾಳೆಂದರೆ - ಮನೆಯಲ್ಲಿ, ಕುಟುಂಬದಲ್ಲಿ, ಸಮಾಜದಲ್ಲಿ, ಉದ್ಯೋಗ ಮಾಡುವ ಕಡೆಯಲ್ಲಿ, ಶಾಲೆಗಳಲ್ಲಿ, ವಿದ್ಯಾರ್ಥಿ ನಿಲಯಗಳಲ್ಲಿ, ರೈಲು ಮತ್ತು ಬಸ್ಸಿನ ಪ್ರಯಾಣದಲ್ಲಿ, ಸಿನಿಮಾ ಮಂದಿರಗಳಲ್ಲಿ ಇನ್ನು ಮುಂತಾದ ಕಡೆಗಳಲ್ಲಿ ಇವುಗಳಲ್ಲಿ ಕುಟುಂಬದಲ್ಲಿ ನಡೆಯುವ ಹಿಂಸೆಯೇ ಮೇಲುಗೈಯಾಗಿದೆ.

ಕುಟುಂಬದಲ್ಲಿ ಹಿಂಸೆ ನಡೆಯಲು ಬೇರೆ ಬೇರೆ ಕಾರಣಗಳಿವೆ. ಅವುಗಳು ಯಾವುವೆಂದರೆ ಹೆಂಡತಿ ಅಂದರೆ ಗಂಡನ ಅಡಿಯಾಳು ಎಂಬ ದೋರಣೆ, ಗಂಡುಸುತನದ ಪ್ರತಿಷ್ಠೆ, ಯಜಮಾನತ್ವ ಸ್ಥಾಪಿಸಲು, ಹೆಂಡತಿ / ಸೊಸೆ ವರದಕ್ಷಿಣೆ ತರದೇ ಇದ್ದ ಪಕ್ಷದಲ್ಲಿ, ಹೆಣ್ಣನ್ನು ಹತೋಟಿಯಲ್ಲಿ ಇಟ್ಟುಕೊಳ್ಳಲು, ಹೆಂಡತಿ / ಸೊಸೆ ಬಂಜೆಯಾಗಿದ್ದರೆ ಅಥವಾ ಗಂಡು ಮಗುವಿಗೆ ಜನ್ಮ ಕೊಡದೆ ಇದ್ದರೆ ಮುಂತಾದವುಗಳು.

ಕುಟುಂಬದಲ್ಲಿ ಅವಳಿಗೆ ಹಿಂಸೆಯಾಗುವ ಸಾಧ್ಯತೆಗಳು ಯಾರಿಂದ ಎಂದರೆ - ಗಂಡ, ತಂದೆ, ಮಾವ, ಅತ್ತೆ, ತಮ್ಮ, ಚಿಕ್ಕಪ್ಪ, ಭಾವ, ಮೈದುನ, ನಾದಿನಿ, ನಾದ್ನಿಯ ಗಂಡ, ಓರಿಗಿತ್ತಿ, ಮಗ ಮತ್ತು ಅತ್ತಿಗೆ.

ಕುಟುಂಬದಲ್ಲಿ ಹಿಂಸೆಯ ಸ್ವರೂಪಗಳು ಯಾವುವೆಂದರೆ - ಮಾನಸಿಕ ಹಿಂಸಚಾರ, ಹೊಡೆಯುವುದು, ಲೈಂಗಿಕ ಅತ್ಯಾಚಾರ, ಸುಡುವುದು, ಅಶ್ಲೀಲ ಶಬ್ಧಗಳಿಂದ ಬೈಯ್ಗುಳ, ಕೋಣೆಯಲ್ಲಿ ಕೂಡಿ ಹಾಕುವುದು, ಸರಿಯಾಗಿ ಊಟ ಕೊಡದೆ ಇರುವುದು, ಇಷ್ಟವಿಲ್ಲದೆ ಅವಳಿಗೆ ಮದುವೆ ಮಾಡಿಸುವುದು, ಚುಚ್ಚು ನುಡಿಯುವುದು, ಆಸೆಗಳನ್ನು ಚಿವುಟುವುದು ಇತ್ಯಾದಿ.

ಹೆಣ್ಣು ಮಕ್ಕಳು ಸುಮ್ಮನಿರದೆ ಇವುಗಳ ವಿರುದ್ಧ ಧ್ವನಿ ಎತ್ತಬೇಕು. ಸೂಕ್ತವಾದ ಪರಿಹಾರ ಕಂಡುಕೊಳ್ಳುವತ್ತ ಯೋಚನೆ ಮಾಡಲು ಪ್ರಾರಂಭಿಸಬೇಕು.

## 3. ವರದಕ್ಷಿಣೆ

ವಧುವಿನ ತಂದೆ ತಾಯಿಗಳು / ಪೋಷಕರು ವರನಿಗೆ ದಕ್ಷಿಣೆ ಕೊಟ್ಟು ಮಗಳ ಮದುವೆ ಮಾಡುವುದನ್ನು ವರದಕ್ಷಿಣೆ ಎನ್ನುತ್ತೇವೆ. ಸರಳವಾಗಿ ಹೇಳುವುದಾದರೆ ತಮ್ಮ ಮಗಳನ್ನು ಮದುವೆಯಾಗಲು ತಂದೆ / ತಾಯಿ / ಪೋಷಕರು ಗಂಡಿಗೆ ಕೊಡುವ ಕಿಮ್ಮತ್ತು ಅಥವಾ ಬೆಲೆ, ಅದು ವಸ್ತು ರೂಪದಲ್ಲಿರಬಹುದು ಅಥವಾ ಹಣದ ರೂಪದಲ್ಲಿರಬಹುದು. ಆದರೆ ಮದುವೆಯ ಸಂದರ್ಭದಲ್ಲಿ ಕೊಡುಗೆಯೆಂದು ಕೊಡುವುದು ವರದಕ್ಷಿಣೆ ಎನಿಸುವುದಿಲ್ಲ.

ಕಾನೂನಿನ ದೃಷ್ಟಿಯಲ್ಲಿ ವರದಕ್ಷಿಣೆ ತೆಗೆದುಕೊಳ್ಳುವುದು, ಕೊಡುವುದು ಅಥವಾ ಆದರ ವಿಷಯದಲ್ಲಿ ಮಧ್ಯಸ್ಥಿಕೆ ವಹಿಸುವುದು ಅಪರಾಧ. ಅಪರಾಧಿಗಳಿಗೆ ಕಾನೂನಿನಲ್ಲಿ ಸೂಕ್ತ ಶಿಕ್ಷೆಯೂ ಕೂಡ ಇದೆ. ಕುಟುಂಬದಲ್ಲಿ ಹಿಂಸೆ ನಡೆಯಲು ವರದಕ್ಷಿಣೆಯೂ ಒಂದು ಕಾರಣವಾಗಿದೆ. ವರದಕ್ಷಿಣೆಯಿಂದ ಇನ್ನೊಂದು ಸಾಮಾಜಿಕ ಸಮಸ್ಯೆ ಹುಟ್ಟಿ ಕೊಂಡಿದೆ. ಅದೇನೆಂದರೆ - 'ಬಾಲ್ಯ ವಿವಾಹ' ವರದಕ್ಷಿಣೆಯ ಭಯದಿಂದಾಗಿ ತಂದೆ ತಾಯಿಗಳು ತಮ್ಮ ಮಗಳನ್ನು ಅತೀ ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡುವುದು ಗ್ರಾಮಾಂತರ ಪ್ರದೇಶದಲ್ಲಿ ನಡೆಯುವುದು ಸಾಮಾನ್ಯವಾಗಿದೆ. ವೈಜ್ಞಾನಿಕವಾಗಿ ಈ ವಯಸ್ಸಿನ ಮಕ್ಕಳಿಗೆ ಆರೋಗ್ಯ (ದೈಹಿಕ), ಮಾನಸಿಕ ಮತ್ತು ಬೌದ್ಧಿಕ ಬೆಳವಣಿಗೆಯೂ ಆಗಿರುವುದಿಲ್ಲ. ಇದರಿಂದ ಮಕ್ಕಳಿಗೆ ಬಹಳ ಅನಾಹುತಗಳಾಗುತ್ತವೆ. ಆದ್ದರಿಂದ ಈ ಎಲ್ಲ ದೃಷ್ಟಿಕೋನಗಳಿಂದ ವರದಕ್ಷಿಣೆ ಎನ್ನುವ ಪಿಡುಗನ್ನು ನಿಲ್ಲಿಸುವುದು ಅನಿವಾರ್ಯವಾಗಿದೆ ಮತ್ತು ನಮ್ಮ ಹೆಣ್ಣು ಮಕ್ಕಳಿಗೆ ಇದರ ಬಗ್ಗೆ ಅರಿವು ಮೂಡಿಸಬೇಕಾಗಿದೆ.

### ಉದ್ದೇಶಗಳು

- ಮಹಿಳೆಯರಿಗೆ ಲಿಂಗತ್ವದ ಬಗ್ಗೆ ಅರಿವು ಮೂಡಿಸುವುದು.
- ನಾವು ಮಹಿಳೆಯರು ಎಂದು ಅಭಿಮಾನ ಪಡಬೇಕು ಮತ್ತು ಸಮಸ್ಯೆಗಳನ್ನು ಧೈರ್ಯವಾಗಿ ಎದುರಿಸಬೇಕು ಎಂಬ ಹೊಸ ಆಲೋಚನೆಯನ್ನು ಹುಟ್ಟಿ ಹಾಕುವುದು.
- ಸಂಘಟನೆಯಲ್ಲಿ ಬಲವಿದೆ ಎಂದು ಮಹಿಳೆಯರಿಗೆ ಮನವರಿಕೆಯಾಗಬೇಕು.
- ಹೆಣ್ಣು ಮತ್ತು ಗಂಡು ಬರೀ ದೈಹಿಕವಾಗಿ ಬೇರೆಯಾಗಿದ್ದಾರೆ. ಇಬ್ಬರು ಒಂದೇ, ಅವರನ್ನು ಬೆಳಸುವಲ್ಲಿ ಯಾವುದೇ ಒಂದು ತಾರತಮ್ಯ ಇರಬಾರದು.
    - ಹೆಣ್ಣು ಮಕ್ಕಳಿಗೆ ಕೂಡ ಶಿಕ್ಷಣದ ಅಗತ್ಯ ಇದೆ.
    - ಹೆಣ್ಣು ಮಕ್ಕಳಿಗೆ ಕೂಡ ಸರಿಸಮವಾದ ಪೌಷ್ಠಿಕ ಆಹಾರದ ಅಗತ್ಯ ಇದೆ.
    - ಚಲನ ಶೀಲತೆಯು ಒಂದು ಸಂಪನ್ಮೂಲ. ಹೆಣ್ಣು ಮಕ್ಕಳಿಗೆ ಕೂಡ ಇದರ ಮೇಲೆ ಸಮಾನ ಹಕ್ಕಿದೆ.
    - ಹೆಣ್ಣು ಮಕ್ಕಳಿಗೆ ಕೂಡ ತಮ್ಮ ಮದುವೆಯ ವಿಚಾರಕ್ಕೆ ಮತ್ತು ನಿರ್ಧಾರಕ್ಕೆ ಹಕ್ಕು ಇದೆ.

- ಕುಟುಂಬದಲ್ಲಿರುವ ನೇರ ಹಿಂಸೆಯನ್ನು ಮತ್ತು ಕಣ್ಣಿಗೆ ಕಾಣದ ಹಿಂಸೆಯನ್ನು ಅರ್ಥ ಮಾಡಿಕೊಳ್ಳುವುದು.
- ಹಿಂಸೆಯನ್ನು ಒಂದು ಸಮಸ್ಯೆಯೆಂದು ಗುರುತಿಸುವುದು ಮತ್ತು ಅದರ ವಿರುದ್ಧ ಹೋರಾಡುವಂತೆ ಮಹಿಳೆಯರಿಗೆ ಪ್ರೇರೇಪಿಸುವುದು.
- ವರದಕ್ಷಿಣೆ ತೆಗೆದು ಕೊಳ್ಳುವುದು, ಕೊಡುವುದು ಅಥವಾ ಈ ವಿಚಾರದಲ್ಲಿ ಮಧ್ಯಸ್ಥಿಕೆ ವಹಿಸುವುದು ಕಾನೂನಿನ ದೃಷ್ಟಿಯಲ್ಲಿ ಅಪರಾಧ. ಹೆಣ್ಣು ಈ ಅನಿಷ್ಟ ಪಿಡುಗನ್ನು ಬಹಿಷ್ಕರಿಸಬೇಕು ಎಂದು ಮನದಟ್ಟು ಮಾಡುವುದು.
- ಸಮಸ್ಯೆಗಳನ್ನು ಒಪ್ಪಿಕೊಂಡು ಅದರಂತೆ ಇರುವುದು ತಪ್ಪು. ಸಮಸ್ಯೆಗಳ ವಿರುದ್ಧ ಧ್ವನಿ ಎತ್ತಿ ಪರಿಹಾರ ಕಂಡುಕೊಳ್ಳುವತ್ತ ಹೆಜ್ಜೆ ಹಾಕುವುದು ಮಹಿಳೆಯರಿಗೆ ಮನವರಿಕೆಯಾಗಬೇಕು.

## ನಿರೀಕ್ಷಿತ ಫಲಿತಾಂಶಗಳು

- ಮಹಿಳೆಯರಿಗೆ ಲಿಂಗತ್ವದ ಬಗ್ಗೆ ಅರಿವು ಮೂಡಿರುವುದು ಮತ್ತು ಅಭಿಮಾನದಿಂದ ಹೆಜ್ಜೆ ಹಾಕುತ್ತಿದ್ದಾರೆ.
- ಮಹಿಳೆಯರು ಧೈರ್ಯವಾಗಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಮತ್ತು ಅವುಗಳ ವಿರುದ್ಧ ಹೋರಾಡುತ್ತಿದ್ದಾರೆ.
- ಹೆತ್ತವರು ಮಕ್ಕಳನ್ನು ಹೆಣ್ಣು ಮತ್ತು ಗಂಡು ಎಂದು ತಾರತಮ್ಯ ಮಾಡದೆ ಸರಿಸಮಾನವಾಗಿ ನೋಡುತ್ತಿರುವುದು.
    - ಹೆಣ್ಣು ಮಕ್ಕಳು ಸಹಾ ಶಾಲೆಗೆ ಹೋಗುತ್ತಿರುವುದು.
    - ಹೆಣ್ಣು ಮಕ್ಕಳು ಸಹಾ ಒಳ್ಳೆಯ ಆಹಾರ ಸೇವಿಸುತ್ತಿರುವುದು.
    - ಹೆಣ್ಣು ಮಕ್ಕಳ ಚಲನಶೀಲತೆಯಲ್ಲಿ ಯಾವ ನಿರ್ಬಂಧ ಇರದೇ ಇರುವುದು.
    - ಹೆಣ್ಣು ಮಕ್ಕಳೇ ತಮ್ಮ ಮದುವೆ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುತ್ತಿರುವುದು ಹಾಗೂ ನಿರ್ಧಾರ ತೆಗೆದುಕೊಳ್ಳುತ್ತಿರುವುದು.
- ಕುಟುಂಬದೊಳಗಿನ ಹಿಂಸೆಯನ್ನು ಸಮಸ್ಯೆ ಎಂದು ಗುರುತಿಸಿ ಅದರ ಪರಿಹಾರದತ್ತ ಹೆಜ್ಜೆ ಹಾಕುತ್ತಾ ಇರುವುದು. ಸಂಘದ ಹೆಣ್ಣು ಮಕ್ಕಳ ಜೊತೆ ಮುಕ್ತವಾಗಿ ಚರ್ಚಿಸುತ್ತಾ ಇರುವುದು.
- ಮಹಿಳಯರು ತಮ್ಮ ಹೆಣ್ಣು ಮಕ್ಕಳಿಗೆ ವರದಕ್ಷಿಣೆ ಕೊಡದೆ / ಗಂಡು ಮಕ್ಕಳಿಗೆ ವರದಕ್ಷಿಣೆಯನ್ನು ತೆಗೆದುಕೊಳ್ಳದೆ ಮದುವೆ ಮಾಡುವಂತಹುದು, ಹಾಗೂ ಈ ವಿಚಾರದಲ್ಲಿ ಮದ್ಯಸ್ಥಿಕೆ ವಹಿಸದೆ ಇರುವುದು.

- ಮಹಿಳೆಯರು ಸಂಘಟನೆಗಳ ಬಲ ತಿಳಿದು ತಮ್ಮ ಸಮಸ್ಯೆಗಳನ್ನು ಗುಂಪಿನ ಮಟ್ಟದಲ್ಲಿಯೇ ಪರಿಹಾರ ಕಂಡುಕೊಳ್ಳುವತ್ತ ಪ್ರಯತ್ನ ನಡೆಸುತ್ತಿದ್ದು ; ಗುಂಪಿನ ಮಟ್ಟದಲ್ಲಿ ಪರಿಹಾರ ಸಿಗದೇ ಇದ್ದಾಗ ಸರ್ಕಾರದ ಯೋಜನೆಗಳ ನೆರವಿನಿಂದ ಪರಿಹಾರಕ್ಕಾಗಿ ಪ್ರಯತ್ನ ನಡೆಸಿರುವುದು.
- ಕೊನೆಯದಾಗಿ ಹೇಳುವುದಾದರೆ ಕರ್ನಾಟಕ ಸರ್ಕಾರ ಈ ಮೇಲಿನ ಸಮಸ್ಯೆಗಳನ್ನು ಸಮರ್ಪಕವಾಗಿ ಎದುರಿಸಲು ಹಲವಾರು ಯೋಜನೆಗಳನ್ನು ಹಾಕಿಕೊಂಡಿದೆ. ಮಹಿಳೆಯರು ಈ ಯೋಜನೆಗಳ ಸದುಪಯೋಗ ಪಡೆದುಕೊಳ್ಳಬೇಕಾಗಿ ವಿನಂತಿ.

## ಸಂಪರ್ಕಿಸಬೇಕಾದ ವಿಳಾಸಗಳು

ತಮ್ಮ ಜಿಲ್ಲೆಯ

1. ಸಾಂತ್ವನ ಕೇಂದ್ರ - ದೂರವಾಣಿ ಸಂಖ್ಯೆ - 1091
2. ಗ್ರಾಮ ಪಂಚಾಯತ್ ಕಾರ್ಯಾಲಯ
3. ತಾಲೂಕಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.
4. ಜಿಲ್ಲೆಯ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

# ಹಾಡುಗಳು

ಈ ಪುಸ್ತಕದಲ್ಲಿ ಸಮಾನತೆ, ವರದಕ್ಷಿಣೆ, ಕೌಟುಂಬಿಕ ಹಿಂಸೆ, ಈ ವಿಷಯಗಳನ್ನು ಆಧರಿಸಿ ಕೆಲವು ಹಾಡುಗಳನ್ನು ಮಾತ್ರ ನೀಡಲಾಗಿದೆ. ಈ ಹಾಡುಗಳನ್ನು ವಾರದ ಸಭೆಗಳಲ್ಲಿ, ನಾಟಕಗಳ ಮಧ್ಯದಲ್ಲಿ ಹಾಗೂ ಸಾಮೂಹಿಕ ಕಾರ್ಯಕ್ರಮಗಳಲ್ಲಿ ಬಳಸಬಹುದಾಗಿದೆ. ಇದಕ್ಕೆ ಸ್ವರ, ಮೇಳಗಳನ್ನು ಪ್ರಾಸ ಬದ್ಧವಾಗಿ ಉಪಯೋಗಿಸಬಹುದಾಗಿದೆ.

# ಹಾಡುಗಳು

## 1. ವರದಕ್ಷಿಣೆ ಹಾಡು

ವರನಂತೆ ವರದಕ್ಷಿಣೆಯಂತೆ
ಕೊಡದಿರೆ ತಾಳಿ ಕಟ್ಟನಂತೆ ॥ ಪಲ್ಲವಿ ॥

ಫ್ರಿಡ್ಜು ಟಿವಿ ಕಾರು ಒಡವೆ
ಜೊತೆಗೇ ಸೈಟು ಕೊಡಬೇಕಂತೆ

ನಗದು, ಭಾರಿ ಭೋಜನ ರಾಸಿ
ಉಡುಗೊರೆ ಕೂಡಾ ಬೇಕಂತೆ

ಮದುವೆ ಹೆಣ್ಣು ಚಿನ್ನದ ಡಾಬು
ಕಾಸಿನ ಮಾಲೆ ಕೊಡಬೇಕಂತೆ

ವರನಂತೆ ವರದಕ್ಷಿಣೆಯಂತೆ
ಕೊಡದಿರೆ ತಾಳಿ ಕಟ್ಟನಂತೆ ॥ ಪಲ್ಲವಿ ॥

ಬಂದರು ಬಂದರು ಪೋಲೀಸ್ ಬಂದರು
ಹಿಡಿದರು ವರನ ಕುತ್ತಿಗೆ ಪಟ್ಟಿ
ತಂದೆ ತಾಯಿಯ ಕೈಯಿಗೆ ಪಟ್ಟಿ
ತಂದೆ ತಾಯಿಯ ಕೈಯಿಗೆ ಕೋಳ
ಠಾಣೆಗೆ ಎಳೆದರು ಒದ್ದರು ಒದ್ದರು

ಏಳು ವರ್ಷ ಜೇಲಿನ ಕಂಬಿ
ಎಣಿಸಿ ಎಣಿಸೀ ಕಂಬನಿ ತುಂಬಿ
ಜೊತೆಗೆ ಕೋರ್ಟಿಗೆ ದಂಡ ಕಟ್ಟಿ
ಕಲಿತರು ಬುದ್ಧಿ ಕಡೆಗೂ ನಂಬಿ

ಬೇಡವೇ ಬೇಡಾ ಈ ತೊಳಲಾಟ
ವರದಕ್ಷಿಣೆಯ ಭೂತನ ಕಾಟ

## 2. ವರದಕ್ಷಿಣೆ ಹಾಡು

ಬನ್ನಿ ಬನ್ನಿ ಬನ್ನಿರಣ್ಣ ಬನ್ನಿ ಬನ್ನಿ
ಬನ್ನಿ ಬನ್ನಿ ಬನ್ನಿರಣ್ಣ ಬನ್ನಿ ಬನ್ನಿ
ಎಲ್ಲರೂ ವರದಕ್ಷಿಣೆ ಭೂತ ಓಡಿಸೋಣ
ಇದರಿಂದ ಮುಕ್ತಿಹೊಂದೋಣ.

ವರದಕ್ಷಿಣೆ ಪಡೆದ ವರನಿಗೆ
ಆರು ತಿಂಗಳಿನಿಂದ ಐದು ವರ್ಷಗಳವರೆಗೆ
ಸೆರೆಮನೆ ವಾಸ
ಹದಿನೈದು ಸಾವಿರ ರೂ. ಜುಲ್ಮಾನೆ.

ವರದಕ್ಷಿಣೆಯಿಲ್ಲದ ಮದುವೆ ಆಗುವ
ವರನಿಗೆ ಸೃಷ್ಟಿಸೋಣ
ಅವನಿಗೆ ಬುದ್ಧಿ ಕಲಿಸೋಣ
ಅವನಿಂದ ಸಾರಿ ಹೇಳೋಣ
ವರದಕ್ಷಿಣೆ ಪಡೆಯುವುದು ಅಪರಾಧ.

ಮದುವೆ ಗಂಡ ಹೆಂಡತಿ
ಪವಿತ್ರ ಬಂಧನ
ಅದು ಜೀವನಕ್ಕೆ ತರುವುದು
ಜ್ಯೋತಿಯ ಸಾಗರವಾಗಲಿ.



## ಕೌಟುಂಬಿಕ ಹಿಂಸೆ

ಹಿಂಸೆ ಹಿಂಸೆ ಮನೆಯೊಳಗೆ
ಮನೆ ಹೊರಗೆ ಹಿಂಸೆಯೇ

ದೈಹಿಕವಾಗಿ ಮಾನಸಿಕವಾಗಿ
ನೀಡುವ ದೌರ್ಜನ್ಯ ತಡೆಯಬೇಕು.

ಮಾತು ಮಾತಿಗೂ ಹೆಣ್ಣಿಗೆ
ಹಿಂಸೆ ನೀಡುವ ಪುರುಷ ಸೃಷ್ಟಿ ಜೀವನು.

ಹೆಣ್ಣು ಗಂಡು ಒಂದಾಗಿ
ಬಾಳುವುದೇ ಪಾವನ.

ಹೆಣ್ಣು ಶಕ್ತಿ, ಧೈರ್ಯ, ಸಹನೆ ಪಡೆದವಳು
ಏಕೆ ? ಹಿಂಸೆ ನೀಡುವಿರಾ ಇವಳ ಮೇಲೆ.

ಹೆಣ್ಣು ಯಾವ ವಿಷಯದಲ್ಲಿ ಕಡಿಮೆ
ಹೇಳಿ ನಿಮ್ಮ ವ್ಯಕ್ತಿತ್ವ ಬೀರಿ.

ಗಂಡು ಮಕ್ಕಳ ಮುನ್ನಡೆಯುವಿಕೆ
ಸ್ತ್ರೀಯಿಂದಲೇ ಸಾಧ್ಯ.

ಹಿಂಸೆ ಹಿಂಸೆ ಮನೆಯೊಳಗೆ
ಮನೆಯ ಹೊರಗೆ ಹಿಂಸೆಯೇ.



(ಚಿತ್ರ - 1)

ಅನ್ನ ಕೊಟ್ಟವಳಿಗೆ ಬೈಯ್ಗುಳ ಬೇಡ  ಕುಟುಂಬದಲ್ಲಿ ಹಿಂಸೆ



(ಚಿತ್ರ - 1)

# ಸಮಾನತೆಯ ಹಾಡು

## ಹೋಗಿ ಬಾ ಮಗಳೇ

1 ಹೋಗು ಮುದ್ದಿನ ಮಗಳೇ ಹೋಗಿ ಬಾ
ಆ ನಿನ್ನ ಮನೆಯನ್ನು ಬೆಳಗಿ ಬಾ

2 ಗಂಡ ದೇವರು ಅಲ್ಲಾ
ನೀ ದಾಸಿಯೂ ಅಲ್ಲಾ
ಸಂಸಾರ ಬಂಡಿಯಲ್ಲಿ
ನೀವೆರಡು ಗಾಲಿಗಳು

3 ಹೊಣೆಯಂತೆ ಹಾದಿಯಲ್ಲಿ
ಏಳು ಬೀಳದ ಸಹಜ
ಗೆಳೆಯ ಗೆಳತಿಯರಂತೆ
ಹಿತವಾಗಿ ಬದುಕಿ

4 ತಗ್ಗುವುದು ಬಗ್ಗುವುದು
ಇಬ್ಬರಲ್ಲಿ ಬರಬೇಕು
ಇಲ್ಲದಿದ್ದರೆ ಬದುಕೆಲ್ಲಾ
ಅದು ಬರಿಯ ನರಕ

5 ಗೌರವ ಬದುಕಿನಲ್ಲಿ
ಕೃತಕತೆಯು ಇರದಿರಲಿ
ವ್ಯಕ್ತಿ ಘನತೆಗೆ
ಕುಂದು ಬಾರದಿರಲಿ

6 ಪ್ರೀತಿ ಹಣತೆಗೆ ಬರುವ
ಇಂತಹ ಬಿರುಗಾಳಿಯನು
ತಡೆದು ನಿಲ್ಲುವ ಛಲ
ನಿನ್ನದಿರಲಿ

7 ಧನದಾಹ ವ್ಯಾಮೋಹ
ಅತಿಯಾಗಿ ಮಿತಿಮೀರಿ
ಬದುಕು ಹೊರೆಯಾದಾಗ
ಹೊರಗೆ ಬಾ ಮಗಳೆ

8 ತೂರಬೇಡಿ ಗಾಳಿಗೆ
ಹೆಣ್ಣತನದ ಘನತೆಯ
ಜೀವ ಕೊಡುವ ಜೀವವಿದು
ಕಡಿಮೆ ಯಾರಿಗೆ, ಸರಿಸಮಯಾರಿಗೆ

9 ನಾಚಬೇಡಿ ಹೆಣ್ಣತನಕ್ಕೆ ॥ 2 ॥
ತಲೆ ಎತ್ತಿನಿಲ್ಲಿರಿ
ನಾಚಬೇಕು ತುಳಿದವರು
ಮನುಜಾತಿಗೆ ಸೇರಿದ್ದವರು

10 ಕತ್ತಲೆಯ ಏಕಾಂತದಲ್ಲಿ ॥ 2 ॥
ಕಣ್ಣ ಹನಿ ಸಾಕಪ್ಪ
ಬೆಳಕಿಗೊಮ್ಮೆ ಈಚೇ ಬಾ ॥ 2 ॥
ಕಂಡಿತ ಜೀವನ

11 ನಾನು ನೀನು ಅವಳು ಇವಳು ॥ 2 ॥
ಹೆಣ್ಣಾಗಿ ಬೆಳೆದವರು
ನಾವು ಹೆಣ್ಣಾಗಿ ಬೆಳೆದವರು
ಮನೆಯ ಕಣ್ಣಾಗಿ ನಿಂತವರು ಕಣ್ಣಾಗಿ ನಿಂತವರು

12 ಹೊರೆಯಲ್ಲ ತವರಿಗೆ
ನೀ ನಮ್ಮ ಮನೆ ಮಗಳು
ತರೆದಿಹುದು ನಿನಗ ಸದಾ
ಮನೆಯ ಬಾಗಿಲು

13 ನೀ ನೆಟ್ಟಗಿಡಬಳ್ಳಿ
ಹೂ ಬಿಟ್ಟು ಅರಳಿರಲು
ನೀನೇನು ಅರಳಿ ಬಾ
ತೋರಣವನೇಯಲು

14 ಹೋಗು ಮುದ್ದಿನ ಮಗಳೇ ಹೋಗಿ ಬಾ
ಆ ನಿನ್ನ ಮನೆಯನ್ನು ಬೆಳಗಿ ಬಾ ॥ 2 ॥



## ಹೆಣ್ಣಿನ ಮಹಿಮೆ

ಹೆಣ್ಣಿಲ್ಲದೆ ನಿಮಗೆ ಜನ್ಮನೇ ಇಲ್ಲ ॥ ಪಲ್ಲವಿ ॥
ಹೆಣ್ಣಿನ ಮಹಿಮೆ ತಿಳಿದಿಲ್ಲ
ನೀವು ಹೆಣ್ಣಿನ ಮಹಿಮೆ ತಿಳಿದಿಲ್ಲ.

ಒಲಿಂಪಿಕ್ ಕ್ರೀಡಾಕೂಟದಲ್ಲಿ
ಪಿ.ಟಿ. ಉಷಾಳ ಗೆಲುವಿಗೆ ಓಟ
ಮಕ್ಕಳಲ್ಲಿ ತಾರತಮ್ಯ ಮಾಡದಿರಲಿ ನೋಟ.

ವೀರರಾಣಿ ಝಾನ್ಸಿಲಕ್ಷ್ಮಿ ಬ್ರಿಟೀಷರ ವಿರುದ್ಧ
ಸೆಣಸಾಡಲು ಮುಂದಾಳತ್ವದೇ ಹೆಣ್ಣು ಕುಲಕ್ಕೆ
ಕೊಟ್ಟಿರುವ ದಾರಿ

ತಿಹಾರ್ ಜೈಲಿನಂಥ ಮರ್ಯಾದೆ
ಪಾಪಕೂಪವನ್ನು ಆಶ್ರಮವನ್ನಾಗಿಸಲು
ಕಿರಣ್‌ಬೇಡಿಯೇ ಬೇಕಾಗಿದಿತ್ತು.

ತಾಯಿಯಾಗಿ ಮಗಳಾಗಿ ಸಹೋದರಿಯಾಗಿ
ಸತಿಯಾಗಿ ಮತಿಯಾಗಿ ಬೇಸರ ನೀಗಿ
ಜೋಕೆ ಮಾಡುವ ಹೆಣ್ಣು ತಾವಾಗಿ.

ಹೆಣ್ಣಿಲ್ಲದೆ ನಿಮಗೆ ಜನ್ಮನೇ ಇಲ್ಲ
ಹೆಣ್ಣಿನ ಮಹಿಮೆ ತಿಳಿದಿಲ್ಲಾ
ನೀವು ಹೆಣ್ಣಿನ ಮಹಿಮೆ ತಿಳಿದಿಲ್ಲ.



## 2. ಸಮಾನತೆ ಹಾಡು

ಗಂಡು ಹೆಣ್ಣು ಬೇರೆನಲ್ಲ
ಇಬ್ಬರೂ ತರುವರು ಬಾಳಿಗೆ ಬೆಲ್ಲ.

ಸಿಗಲಿ ಅವರಿಗೆ ಸಮಾನ ವೇತನ
ಒಂದೇ ಅಲ್ಲವೇ ಇಬ್ಬರ ಜೀವನ.

ಇಬ್ಬರ ಗಳಿಕೆ ಕೂಡಲಿ
ಕೂಡಿ ಮನೆಯ ಬೆಳೆಸಲಿ.

ಒಂದೇ ಮರದ ಕವಲುಗಳವರು
ಫಲವನು ಸರಿಸಮ ಪಡೆಯುವರು.

ತೊಟ್ಟಿಲು ತೂಗುವ ಕೈ
ಜಗತ್ತನೆ ಆಳಿ ತೋರಿಸಿದ ಹೆಣ್ಣು

ಗಂಡು ಹೆಣ್ಣು ಬೇರೆನಲ್ಲ
ಇಬ್ಬರೂ ತರುವರು ಬಾಳಿಗೆ ಬೆಲ್ಲ.



(ಚಿತ್ರ - 2, 3)



(ಚಿತ್ರ - 2)







ಲಿಂಗ ತಾರತಮ್ಯ

(ಚಿತ್ರ - 3)

# ಘೋಷಣೆಗಳು

ಈ ಕೈಪಿಡಿಯಲ್ಲಿ ನೀಡಿರುವ ಘೋಷಣೆಗಳು ವರದಕ್ಷಿಣೆ, ಕೌಟುಂಬಿಕ ಹಿಂಸೆ, ಲಿಂಗ ತಾರತಮ್ಯದ ಆಧಾರಿತವಾಗಿದೆ. ಈ ಘೋಷಣೆಗಳನ್ನು ಪ್ರತಿ ವಾರದ ಸಭೆಯ ನಂತರ, ಸಾಮಾಜಿಕ / ಸಾಮೂಹಿಕ ಮೇಳದ ಮುಕ್ತಾಯ ಹಂತದಲ್ಲಿ ಕಡ್ಡಾಯವಾಗಿ ಪ್ರತಿ ಸದಸ್ಯರು ಘೋಷಣೆ ತೆಗೆದುಕೊಳ್ಳವುದು. ಈ ಘೋಷಣೆಗಳೊಂದಿಗೆ ವಿಷಯಕ್ಕೆ ಸಂಬಂಧಿಸಿದಂತೆ ಮತ್ತು ಸಂದರ್ಭಕ್ಕೆ ತಕ್ಕಂತೆ ಘೋಷಣೆಗಳನ್ನು ರಚಿಸಿ ಬಳಸಿಕೊಳ್ಳಬಹುದಾಗಿದೆ.

# ಘೋಷಣೆಗಳು

- ❑ ಗಂಡು ಹೆಣ್ಣು ಇಬ್ಬರೂ ಸ್ವತಂತ್ರರು (ಚಿತ್ರ-9, 9ಎ)
- ❑ ಮಗಳು ಮತ್ತು ಮಗ
  ಇಬ್ಬರಿಗೂ ಓದು ಸಮಾನ (ಚಿತ್ರ-2)
- ❑ ಊಟದಲ್ಲಿ ತಾರತಮ್ಯ ಬೇಡ
  ಇಬ್ಬರಿಗೂ ಬಿಸಿ ಊಟ (ಚಿತ್ರ-3)
- ❑ ಇಬ್ಬರು ನೀರು ತರಲಿ ಮತ್ತು ಇಬ್ಬರು ಆಡಲಿ ? ಇದು ಹೀಗೆ (ಚಿತ್ರ-7, 7ಎ)
- ❑ ಹೆಂಡತಿಗೆ ಹೊಡೆತ
  ಗಂಡನಿಗೆ ಶಿಕ್ಷೆ (ಚಿತ್ರ-14)
- ❑ ಸೊಸೆಯು ಮಗಳು ತಾನೆ
  ಅವಳನ್ನು ಕೆಟ್ಟ ದೃಷ್ಠಿಯಿಂದ ನೋಡುವುದು ಬೇಡ (ಚಿತ್ರ-8)
- ❑ ಅತ್ತಿಗೆ ತಾಯಿ ಸಮಾನ
  ಸಭ್ಯತೆಯಿಂದ ನಡೆದು ಕೊಳ್ಳಿ (ಚಿತ್ರ-11)
- ❑ ಅನ್ನ ಕೊಟ್ಟವಳಿಗೆ ಬೈಯ್ಗಳ ಬೇಡ (ಚಿತ್ರ-1)
- ❑ ವರದಕ್ಷಿಣೆ ಬೇಡ ಮದುವೆಗೆ, ಪ್ರೀತಿ ಸಾಕು ಜೋಡಿಗೆ
  (ಚಿತ್ರ-13, 13ಎ, 13ಬಿ)
- ❑ ನನ್ನ ದುಡಿಮೆ ವ್ಯರ್ಥವೆ ! ನನ್ನ ಉಳಿತಾಯಕ್ಕೆ ಎಲ್ಲಿದೆ ಆದಾಯ ?
  ನಮ್ಮಿಬ್ಬರ ಉಳಿತಾಯ ಸುಖ ಸಂಸಾರಕ್ಕೆ ಉಪಾಯ (ಚಿತ್ರ-6, 6ಎ, 6ಬಿ)
- ❑ ಈ ಆಡುವ ಕೂಸಿಗೆ ಮದುವೆ ಏಕವ್ವ ?
  18ಕ್ಕೆ ಮುಂಚೇ ಮದುವೆ ಅಪರಾಧ (ಚಿತ್ರ-12, 12ಎ)
- ❑ ನನಗೆ ಮನೆ ಕೆಲಸ ನಿನಗೆ ಓದು
  ನಮ್ಮಿಬ್ಬರಿಗೂ ಓದು ಸಮಾನ
- ❑ ಗಂಡು - ಹೆಣ್ಣು ಇಬ್ಬರ
  ಆರೋಗ್ಯಕ್ಕೂ ಔಷಧಿ ಅಗತ್ಯ (ಚಿತ್ರ-15, 15ಎ, 15ಬಿ)
- ❑ ಆಸ್ತಿಯಲ್ಲಿ ಸಮಾನ ಪಾಲು (ಚಿತ್ರ-10)
- ❑ ನಿನಗೆ ಅವರಿಗೆ ಒಂದೇ ವೇತನ
  ಮಾಡುವುದಿಲ್ಲವೇ ಅವರು ಕೆಲಸ ಸಮಾನ (ಚಿತ್ರ-4, 4ಎ)
- ❑ ದಾಂಪತ್ಯ ಜೀವನ ಅನ್ಯೋನ್ಯವಾಗಿರಲಿ
  ಇದರಲ್ಲಿ ಬಲವಂತ ಬೇಡ (ಚಿತ್ರ-5ಎ)
- ❑ ಹಳೆಯ ಸಂಪ್ರದಾಯ ಬೇಡ,
  ಪ್ರಚಾರದಿಂದ ಮಾನಸಿಕ ಹಿಂಸೆ ಬೇಡ (ಚಿತ್ರ-5)

ಸಿಗಲಿ ಅವರಿಗೆ ಒಂದೇ ವೇತನ

ಮಾಡುವುದಿಲ್ಲವೇ ಅವರು ಕೆಲಸ ಸಮಾನ




(ಚಿತ್ರ - 4)




**CONTACT :**

1. Thasildhar (Taluk officer)
2. Secretary - Social Justice Committee - Gram Panchayat

(ಚಿತ್ರ - 4ಎ)

ನನಗೆ ಬೇಡ ಈ ಹಳೆಯ ಸಂಪ್ರದಾಯ ಅಥವಾ ಪ್ರಚಾರ ಬೇಡ ಸಮಾರಂಭಕ್ಕೆ
ಅಥವಾ ನನಗೆ ಮಾನಸಿಕ ಹಿಂಸೆ ಬೇಡವೇ ಬೇಡ



(ಚಿತ್ರ - 5)

ದಾಂಪತ್ಯ ಜೀವನ ಅನ್ಯೋನ್ಯವಾಗಿರಲಿ
ಇದರಲ್ಲಿ ಬಲವಂತ ಬೇಡ ಕುಟುಂಬದಲ್ಲಿ ಹಿಂಸೆ



(ಚಿತ್ರ - 5ಎ)

ನನ್ನ ದುಡಿಮೆ ವ್ಯರ್ಥವೆ ? ನನ್ನ ಉಳಿತಾಯ ಎಲ್ಲರ ಆದಾಯ

ನಮ್ಮಿಬ್ಬರ ಉಳಿತಾಯ ಸುಖ ಸಂಸಾರಕ್ಕೆ ಉಪಾಯ




(ಚಿತ್ರ - 6)

## ಅವಳು ನೀರು ತರಲಿ, ಇವನು ಗೋಲಿ ಆಡಲಿ ಇದು ಏಕೆ ?



(ಚಿತ್ರ - 7)

ಇಬ್ಬರೂ ನೀರು ತರಲಿ ಮತ್ತು ಇಬ್ಬರೂ ಆಡಲಿ ಇದು ಹೀಗೆ



(ಚಿತ್ರ - 7ಎ)

# ಸೊಸೆಯು ಮಗಳೇ ತಾನೆ ?

## ಅವಳನ್ನು ಕೆಟ್ಟ ದೃಷ್ಟಿಯಿಂದ ನೋಡುವುದು ಬೇಡ

## ಕುಟುಂಬದಲ್ಲಿ ಹಿಂಸೆ



(ಚಿತ್ರ - 8)

# ನನಗೇಕೆ ಯಾವಾಗಲೂ ರಕ್ಷೆ / ಬಂಧನ



(ಚಿತ್ರ - 9ಎ)

# ಆಸ್ತಿಯಲ್ಲಿ ಸಮಾನ ಪಾಲು




(ಚಿತ್ರ - 10)

# ಅತ್ತಿಗೆ ತಾಯಿ ಸಮಾನ ಸಭ್ಯತೆಯಿಂದ ನಡೆದುಕೊಳ್ಳಿ
# ಕುಟುಂಬದಲ್ಲಿ ಹಿಂಸೆ

ನಾಟಕ ಗೃಹ ಲಕ್ಷ್ಮಿ



(ಚಿತ್ರ - 11)

# ನಾಟಕಗಳು

ಸೂಚನೆ :- ಈ ಪುಸ್ತಕದಲ್ಲಿ 'ಗಂಗಾ ಜಮುನಾ', 'ಲಕ್ಷ್ಮಿ ಕಟಾಕ್ಷ', 'ಗೃಹಲಕ್ಷ್ಮಿ', ಮತ್ತು 'ಹೆಣ್ಣು - ಸಂಸಾರದ ಕಣ್ಣು', ಎಂಬ ನಾಲ್ಕು ಕಿರು ನಾಟಕಗಳನ್ನು ನೀಡಲಾಗಿದೆ.

ಈ ನಾಟಕಗಳನ್ನು ಬೀದಿ ನಾಟಕಗಳ ಮೂಲಕ, ಕಲಾತಂಡ ಗುಂಪಿನ ಸದಸ್ಯರ ಮುಖಾಂತರ, ಕಾರ್ಯಕರ್ತೆಯರ ತಂಡದಿಂದ ಪ್ರಯೋಗಿಸಬಹುದಾಗಿದೆ. ನಾಟಕಗಳ ಮಧ್ಯೆ ಈ ಕೈಪಿಡಿಯಲ್ಲಿ ನೀಡಿರುವ ಹಾಡುಗಳನ್ನು, ಘೋಷಣೆಗಳನ್ನು ಸಂದರ್ಭಕ್ಕೆ ತಕ್ಕಂತೆ ಬಳಸಬಹುದಾಗಿದೆ. ನಾಟಕ ಮಾಡುವಾಗ ಆಯಾ ಪ್ರದೇಶದ ಆಡು ನುಡಿಯನ್ನು ಬಳಸಿ ಕೊಳ್ಳಬಹುದು, ಆದರೆ ನಾಟಕದ ಮೂಲ ಉದ್ದೇಶಕ್ಕೆ ಧಕ್ಕೆ ಬರದಂತೆ ಎಚ್ಚರಿಕೆ ವಹಿಸಿ ಅಲ್ಪ ಬದಲಾವಣೆ ಬೇಕೆಂದರೆ ಮಾಡಿಕೊಳ್ಳಬಹುದು.

ನಾಟಕ - 1

# ಗಂಗಾ ಜಮುನಾ

(ಒಂದು ಗಂಟೆಯ ನಾಟಕ)

## ಪಾತ್ರವರ್ಗ :

- ನಿರೂಪಕಿ
- ಗಂಗಾ
- ಜಮುನಾ
- ಗಂಗೆಯ ತಂದೆಯ ರಾಜಣ್ಣ
- ತಾಯಿ ಶಾಂತಮ್ಮ
- ಜಮುನಾ ತಂದೆ ಕೃಷ್ಣಪ್ಪ
- ತಾಯಿ ಗೌರವ್ವ
- ಗಂಗೆಯ ಗಂಡ ಸಿದ್ಧಪ್ಪ
- ಜಮುನಾ ಗಂಡ ಶಂಕರ
- ಜಮುನಾ ನಾದಿನಿ ಗಿರಿಜಾ
- ಪೊಲೀಸ್ ಇನ್ಸ್‌ಪೆಕ್ಟರ್
- ಸ್ವಸಹಾಯ ಗುಂಪು / ಸ್ತ್ರೀ ಶಕ್ತಿಯ ಸದಸ್ಯೆಯರು
- ಗಂಗೆಯನ್ನು ನೋಡಲು ಬರುವ ಗಂಡು / ತಂದೆ / ತಾಯಿ
- ಮಧ್ಯವರ್ತಿ
- ಊರಿನ ಜನ

## ದೃಶ್ಯ - ಒಂದು

(ನಿರೂಪಕಿ ಬಂದು ನಾಟಕಕ್ಕೆ ಚಾಲನೆ ಕೊಡುತ್ತಾಳೆ)

ನಿರೂಪಕಿ : ನೋಡಪ್ಪಾ, ನೋಡ್ರಪ್ಪಾ, ಹೀಂಗೆ ನಿಮ್ಮಥರದ್ದೊಂದು ಊರು. ಹಳ್ಳಿ ಅಂದ್ರ ಹಳ್ಳಿ ಅನ್ನಿ ಪಟ್ಟಣ ಅಂದ್ರೆ ಪಟ್ಟಣ ಅನ್ನಿ. ನಮ್ಮನಿಮ್ಮತರಹ ಜನಗಳು. ಎಲ್ಲಾ ಊರಲ್ಲೂ ಇರೋ ಹಂಗೆ ಅಲ್ಲೂ ಮನೆ, ಕೇರಿ, ಬಾವಿಕಟ್ಟೆ, ಕೆರೆ, ಆಲದ ಮರ ಎಲ್ಲಾ ಇದ್ದವು. ಅಲ್ಲಿ ಒಂದು ಹಳ್ಳದ ಕೇರಿ ಅಂತ ಇತ್ತು ಹಳ್ಳದ ಕೇರಿಯಲ್ಲಿ ಅಕಾ ಆ ತುದಿಗೊಂದು ಮನೆ ಇಕಾ ಈ ತುದಿಗೊಂದು ಮನೆ ಇದ್ದವು. ಆ ಮನೆ ರಾಜಣ್ಣ, ಶಾಂತಮ್ಮನದು, ಈ ಮನೆ ಕೃಷ್ಣಪ್ಪ ಗೌರವ್ವಂದು. ಆಗ ಏನಾಯ್ತಪ್ಪಾ ಅಂದದ್ರೆ ಶಾಂತಮ್ಮ ಮತ್ತು ಗೌರವ್ವ ಒಂಬೇ ಕಾಲಕ್ಕೆ ಬಸಿರಾದ್ರು. ಎರಾಡೂ ಮನೇಲೂ ಸಂಭ್ರಮ. ತೊಟ್ಟಿಲು ತೂಗುವುದೇ ಅಂತ ಸಂತೋಷ. ದಿನ ತುಂಬಿದ ಮೇಲೆ ಇಬ್ಬರೂ ಒಂದೇ ದಿನ ಹಡದ್ರು. ಎಂತಾ ಮಕ್ಕಳು ಅಂತೀರಿ? (ಪ್ರೇಕ್ಷಕರನ್ನು ಪ್ರಶ್ನಿಸಿ) ಎಂತಾ ಮಕ್ಕಳು ಅಂತ ಕೇಳ್ರವ್ವಾ, ನೀವೇ ಹೇಳಿ ನೋಡಾನಾ (ಇಬ್ಬರು ಮೂವರನ್ನು ಕೇಳಿ) ಇಬ್ಬರೂ ಮುದ್ದಾದ ಹೆಣ್ಣು ಮಕ್ಕಳು.

(ಹಾಡು - ಹಾಡುವಾಗ ಗುಂಪು ಬಂದು ಸೇರಿಕೊಂಡು ನರ್ತಿಸಬಹುದು)

ಮುದ್ದಾದ ಮಕ್ಕಳಾದವೋ
ಹೆಣ್ಣು ಮಕ್ಕಳಿಬ್ಬರೂ
ಚೆಂದಾದ ಮಕ್ಕಳಾದವೋ
ಚೆಲುವಾದ ಮಕ್ಕಳಾದವೋ
ಕಣ್ಣು ಬಿಟ್ಟಂತೆ ಶಿವನೇ
ಮುತ್ತಂತ ಮಕ್ಕಳಾದರೂ

ನಿರೂಪಕ : ಚೆಲುವಾದ, ಮುದ್ದಾದ, ಚೆಂದಾದ, ಮುತ್ತಂತ ಇಬ್ಬರು ಹೆಣ್ಣು ಮಕ್ಕಳು ಹುಟ್ಟಿವರು. ಅವರಿಗೆ ಏನು ಹೆಸರಿಟ್ಟರಪ್ಪಾ ಅಂದರೆ (ಪ್ರೇಕ್ಷಕರನ್ನು ಕೇಳುತ್ತಾಳೆ) ಏನ್ ಹೆಸರಿಟ್ರೋಂತ ನೀವೇ ಹೇಳ್ರೀ ? (ಅನೇಕರು ಅನೇಕ ಹೆಸರು ಹೇಳುತ್ತಾರೆ).... ಅದು ಬೇಡಾ... ಗಂಗಾ ಜಮುನಾ ಅಂತ ಇಟ್ಟರು. ಎರಡೂ ಮನೆಗಳಲ್ಲಿ ಹೆಣ್ಣು ಹುಟ್ಟಿದ್ದೇನೋ ನಿಜ. ಆದರೆ ಒಂದು ಮನೆಯಲ್ಲಿ ಸಂಭ್ರಮ. ಇನ್ನೊಂದು ಮನೆಯಲ್ಲಿ..... ಉಹೂಂ.... ನೀವೇ ನೋಡಿ.

(ಹಿಂದಕ್ಕೆ ಸರಿಯುತ್ತಾಳೆ)

(ಕೃಷ್ಣಪ್ಪ, ಗೌರವ್ವನ ಮನೆ. ಅವರು ಮಗುವನ್ನು ಎತ್ತಿ ಆಡಿಸಿ ಮುದ್ದಿಸುವಂತೆ ನಟಿಸುತ್ತಾ ಬರುತ್ತಾರೆ. ಮಗುವನ್ನು ತೊಟ್ಟಿಲಲ್ಲಿ ಹಾಕಿ ತೂಗುವಂತೆ ನಟಿಸುತ್ತಾರೆ)

ಹಾಡು : ಪಾರ್ವತಿ ಸರಸ್ವತಿ ಗಿರಿಜೆ ಮಹಾಶಕ್ತಿ ಹುಟ್ಟಿ ಬಂದಿಹಳಮ್ಮ ನಮ್ಮ ಮನೆಗೇ ಆರುತಿ ಕೀರುತಿ ಮನೆ ಬೆಳಗೋ ಮೂರುತಿ ಹೊತ್ತು ತರುವಳಮ್ಮ ನಮ್ಮ ಮನೆಗೇ.

(ಕೃಷ್ಣಪ್ಪ, ಗೌರವ್ವ ಮಗುವನ್ನು ಮುದ್ದಿಸುತ್ತಿರುವಂತೆಯೇ ಹೊರಟು ಹೋಗುತ್ತಾರೆ - ಹಿಂದೆಯೇ ರಾಜಣ್ಣ ಶಾಂತಮ್ಮ ಪ್ರವೇಶ. ಶಾಂತಮ್ಮ ಕೂತು ಮಗುವಿಗೆ ಹಾಲು ಕುಡಿಸುತ್ತಿರುತ್ತಾಳೆ. ರಾಜಣ್ಣ ಅವಳನ್ನು ಬೈಯುತ್ತಾನೆ)

ರಾಜಣ್ಣ : ಏ..... ತಗೀ ತಗೀ... ಅದೇನು ಆ ಹೆಣ್ಣು ಮಗೂಗೆ ಆಪಾಟಿ ಹಾಲು ಕುಡಿಸ್ತಾ ಕುಂತಿದೀ. ನಡೀ ನಡೀ ಸಾಕಿನ್ನು ಕೆಲ್ಸ ನೋಡು. ಹೆಣ್ಣು ಹುಟ್ಟಿದ್ರೆ ಹುಣ್ಣು ಅಂತಾರೆ. ಹಡದು ಕೂತಿದ್ದಾಳೆ. ಹೆಣ್ಣನ್ನು. ಇನ್ನು ಎದ್ದು ಕೆಲ್ಸನೋಡ್ ಹೋಗು. ಸಾಕಿನ್ನು ಬಾಣಂತನ ಏಳೇಳ್.

ಹಾಡು

ಗಂಡು ಮಗು ಹುಟ್ಟಿದರೆ

(ಮೇಳ) ಹುಟ್ಟಿದರೇ

ಕುಣಿಯುವರು ಕುಣಿಯುವರು

(ಮೇಳ) ಕುಣಿಯುವರು

ಹೆಣ್ಣು ಮಗು ಹುಟ್ಟಿದರೇ

(ಮೇಳ) ಹುಟ್ಟಿದರೇ

ನರಳುವರು ಕೊರಗುವರು

(ಮೇಳ) ಕೊರಗುವರು

ಹೆಣ್ಣು ಗಂಡಿನ ನಡುವೆ

ಭೇದವಿಲ್ಲವೋ ಮೂರ್ಖಾ

ಹೆಣ್ಣೆ ಹೆಣ್ಣೆಂದು ದೂರಿ

ಕೊಡಬೇಡಾ ನರಕಾ

## ದೃಶ್ಯ - ಎರಡು

(ಬಾವಿಕಟ್ಟೆ ಬಳಿ ಆರೇಳು ವರ್ಷದ ಹುಡುಗಿಯರಾದ ಗಂಗಾ ಜಮುನಾ ಆಡುತ್ತಿದ್ದಾರೆ)
(ಸರಕ್ಕನೆ ಗಂಗೆಯ ತಾಯಿ ಶಾಂತಮ್ಮ ಬಂದು ಗಂಗೆಯನ್ನು ಎಳೆಯುತ್ತಾಳೆ)

ಶಾಂತವ್ವ : ಏ...ಶನಿ...ಏನ್ ಆಟ ಆಡ್ತಾಕೂತಿದ್ದಿಯಾ ? ನಡೀ ನೀರ್ ತಗೋಂಡ್ ಬಾ ಆಟ ಆಡ್ತಾಳಂತೆ ಆಟ.....

ಗಂಗೆ : ನೀನೇ ತಗೊಂಡ್ ಬಾವ್ವ

ತಾಯಿ : (ಕೆನ್ನಗೆ ಹೊಡೆದು) ಇಷ್ಟುದ್ದ ಇದ್ದೀಯಾ ನಂಗೇ ಹೇಳ್ತೀಯಾ ? ನಾನು ನೀರು ತರಕ್ಕೆ ಹೋದ್ರೆ ನಿನ್ ತಮ್ಮನಿಗೆ ಹಾಲು ಕುಡಿಸೋರು ಯಾರು ? ವಂಶ ಬೆಳೆಸೋದು ಅವನು ಅವನಿಗೆ ಹಾಲು ಕುಡಿಸದಿದ್ರೆ ಮುಂದೆ ಬೆಳೆದು ದೊಡ್ಡೋನಾಗಿ ನಮ್ಮನ್ನ ಸಾಕ್ತಾನ ? ಹೋಗೇ, ಹೋಗಿ ನೀರ್ ತಗೋಂಡು ಬಾ ನಾನು ರಾಜಂಗೆ ಹಾಲು ಕುಡಿಸಬೇಕು.

(ಶಾಂತವ್ವ ಗಂಗೆಯನ್ನು ಎಳೆದುಕೊಂಡು ಹೋಗುತ್ತಾಳೆ ಜಮುನಾ ನೋಡುತ್ತಾ ನಿಲ್ಲುತ್ತಳೆ. ಅಷ್ಟರಲ್ಲಿ ಜಮುನಾ ತಾಯಿ ಗೌರವ್ವ ಬರುತ್ತಾಳೆ.)

ಗೌರವ್ವ : ಜಮುನಾ....ಏ....ಜಮುನಾ.... ಇಲ್ಲಿದ್ದೀಯೇನವ್ವಾ ? ನಾನು ಎಲ್ಲಲ್ಲೋ ಹುಡಿಕ್ಕೊಂಡು ಬಂದೆ. ಬಾ ನನ್ ಕಂದ ಏನ್ ಮಾಡ್ತಾ ಇದ್ದೇ ?

ಜಮುನಾ : ಅವ್ವಾ ಅವ್ವಾ, ಗಂಗೆ ಅವರ ಅವ್ವ ಬಂದು ಅವಳನ್ನು ಎಳೆಕೊಂಡು ಹೋದ್ಲು.

ತಾಯಿ : ಯಾಕವ್ವ ?

ಜಮುನಾ : ಅವಳು ನೀರು ತರಬೇಕಂತೆ...... ಅವ್ವಾ ಅವ್ವಾ....

ತಾಯಿ : ಏನವ್ವಾ ?

ಜಮುನಾ : ಗಂಗೆ ಅವರ ಅವ್ವ ಅವಳ್ನ ಯಾವಾಗ್ಲೂ ಶನಿ ಶನಿ ಅಂತ ಬೈತಾ ಇರ್ತಾಳೆ ಯಾಕವ್ವ ?

ತಾಯಿ : ಅವರು ಹುಚ್ಚರು ಕಣವ್ವಾ ಅದಕ್ಕೆ ಹೆಣ್ಣು ಅಂದ್ರೆ ಏನೋ ಕಾಲಕಸ ಅಂದುಕೊಂಡು ಬಿಟ್ಟಿದ್ದಾರೆ.

ಜಮುನಾ : ಯಾಕವ್ವಾ

ತಾಯಿ : ಗಂಡು ಮಗ ಆಂದ್ರೆ ವಂಶ ಉದ್ಧಾರ ಮಾಡಿ ಬಿಡ್ತಾನೆ. ಅನ್ನೋ ಭ್ರಮೆ ಏನೋ ಮಹಾ ಇವರದು. ಅರಸು ಪಾಳೇಗಾರರ ವಂಶ ನೋಡೊ ಅದಕ್ಕೆ ಹೆಣ್ಣು ಮಕ್ಕಳೇನು ಮಕ್ಕಳಲ್ವಾ ? ಬುದ್ಧಿ ಇಲ್ಲ ಅವರಿಗೆ.

ಜಮುನಾ : ಅವ್ವಾ, ನಾನು ?

ತಾಯಿ : (ಜಮುನಾಳನ್ನು ಮುದ್ದಿಸುತ್ತಾ) ನೀನು ನಮ್ ಮನೆ ಮಹಾಲಕ್ಷ್ಮಿ ಕಣವ್ವಾ, ನನ್ ಕಂದ ನೀನು, ಬಾ ನಿಂಗೋಸ್ಕರ ಜೋಳ ತಂದಿದ್ದೀನಿ. ಸುಟ್ಟು ಕೊಡ್ತೀನಿ. ತಿನ್ನುವಂತೆ ನಡಿಯುತ್ತಾ (ಹೋಗುತ್ತಾರೆ).

ದೃಶ್ಯ - ಮೂರು

(ಶಾಂತವ್ವ ಬಂದು ಮಲಗಿರುವ ಗಂಗೆಯನ್ನು ಎಬ್ಬಿಸುತ್ತಾಳೆ)

ಶಾಂತವ್ವ : ಗಂಗೀ.....ಏ.......ಗಂಗೀ, ಏಳೇ ಇಷ್ಟು ಹೊತ್ತಾದ್ರೂ ಹೊದ್‌ಕೊಂಡ ಮಲಕ್ಕೊಕಂಡಿದ್ದೀಯಲ್ಲ ಕೆಲ್ಸ ಯಾರು ಮಾಡೋರು.

ಗಂಗೆ : ಅವ್ವಾ ನಂಗೆ ಜ್ವರ ಬಂದದೆ. ನೋವು, ಮೈಯಲ್ಲಾ ನೋವು.

ತಾಯಿ : ಅಯ್ಯೋ, ಹೌದಲ್ಲ. ಏನೇ ಮಾಡೋದೂ, ನೀನು ಜ್ವರ ಬಂದು ಮಲಗಿಬಿಟ್ರೆ ನಾನೊಬ್ಬಳೇ ಎಲ್ಲ ಕೆಲ್ಸ ಹೆಂಗೆ ನಿಭಾಯಿಸೋದು ? ಹೋಗ್ಲಿ ಕಷಾಯ ಮಾಡಿಕೊಡ್ತಿನಿ ಕುಡಿ ಸರಿಹೋಗ್ತದೆ.

ಗಂಗೆ : ಅವ್ವಾ, ಹೋದ್ ಸಲಾನೂ ಕಷಾಯನೇ ಮಾಡಿಕೊಟ್ಟೆ, ವಾರ ಆದ್ರೂ ಜ್ವರ ಹೋಗಲೇ ಇಲ್ಲ, ನನ್ನನ್ನೂ ಡಾಕುಟ್ರ ಹತ್ರ ಕರ್ಕೊಂಡು ಹೋಗು.

ತಾಯಿ : ಅಯ್ಯೋ, ಅದೆಲ್ಲ ಯಾಕೆ ಬುಡು. ಕಷಾಯ ಕುಡಿ ಸಾಕು. ಇನ್ನೂ ಆ ಔಷಧಿಗೆಲ್ಲ ದುಡ್ಡು ಯಾರು ತರೋರು ?

ಗಂಗೆ : ಮತ್ತೆ ರಾಜಂಗೆ ಜ್ವರ ಬಂದಿದ್ದಕ್ಕೆ ಡಾಕ್ಟ್ರ ಹತ್ರ ಕರ್ಕೊಂಡು ಹೋಗಿದ್ದೆ ?

ತಾಯಿ : ಅವನು ಗಂಡುಡುಗ, ಅವನಿಗೆ ಕಾಯ್ಲೆ ಬಂದ್ರೆ ಸುಮ್ನೆ ಬುಟ್ ಬುಡಕಾಯ್ತದಾ ? ನೀನು ಅದ್ನೆಲ್ಲ ಕೇಳಬ್ಯಾಡಾ, ಸುಮ್ಕಿರು.

ಹಾಡು -

ಹೆಣ್ಣಾಗಿ ಹುಟ್ಟಿದಕ ಕಣ್ಣಾಗ ನೀರ್ಯಾಕ

ಹಾಲೊರವ ಮೈಯಿಗ ನೋವಿನ ನಂಜ್ಯಾಕ

ಗಂಡಾಗಿ ಹುಟ್ಟಿದರಾ ದೂರನಾ ಶಿವನು

ಹೆಣ್ಣೆಗಿಲ್ಲದ ಹಿರಿತನ ಗಂಡಿಗ್ಯಾಕ

(ರಾಜ ಬರುತ್ತಾನೆ)

ರಾಜ : ಅವ್ವಾ...ಅಪ್ಪಾ... ನಂಗೆ ತಲೆ ನೋವು.

ರಾಜಣ್ಣ : ಹೌದೇನೋ, ಎಲ್ಲಿ ನೋಡೋಣಾ.... (ಹಣೆಮುಟ್ಟಿ) ಅಯ್ಯಯ್ಯೋ ಸುಡುತಾದಲ್ಲೋ. ....ಲೇ....ಬಾರೇ ಇಲ್ಲಿ ರಾಜಂಗೆ ಜ್ವರ ಸುಡುತಾದೆ. ನಾನು ಅವನನ್ನು ಡಾಕುಟ್ರ ಹತ್ರ ಕರ್ಕೊಂಡು ಹೋಗಿ ಬತ್ತೀನಿ. ಟವಲ್ ತತ್ತಾ.

(ರಾಜನನ್ನು ಎತ್ತಿಕೊಂಡು ಹೋಗುವನು ಗಂಗೆ ನೋಡುತ್ತಾ ನಿಲ್ಲುತ್ತಾಳೆ)

ದೃಶ್ಯ - ನಾಲ್ಕು

ರಾಜಣ್ಣ : ರಾಜಾ, ಇಸ್ಕೋಲಿಗೆ ಹೊಂಟಿಯೇನೋ

ರಾಜ : ಹೋಯ್ತೀನಿ ತಡಿ.

ರಾಜಣ್ಣ : ಆಗ್ಲೇ ಹೊತ್ತಾಯ್ತು, ಇನ್ ಯಾವಾಗ ಓಯ್ತಿಯೋ, ನಡಿ ಮತ್ತೆ.

ರಾಜ : ನಾಳೆ ಹೋಯ್ತಿನಿ.

ರಾಜಣ್ಣ : ನಾಳೆಯ ? ಯಾಕೆ ಇವತ್ತೇನಾ ರಜಾ ಕೊಟ್ಟವ್ರಾ ?

ರಾಜ : ಇವತ್ತು ನಾನ್ ಹೋಗಾಕಿಲ್ಲ.

ರಾಜಣ್ಣ : ಅಂಗೆಲ್ಲ ಮಾಡಬಾರದು, ಹೋಗಪ್ಪ ರಾಜ, ಇಸ್ಕೂಲು ತಪ್ಪಿಸ್ಕಂಡ್ರೆ ಒಳ್ಳೇದಲ್ಲ, ನೀನು ಚೆನ್ನಾಗಿ ಓದಿ ದೊಡ್ ಕೆಲ್ಸಕ್ಕೆ ಸೇರ್ಕಂಡು, ದೊಡ್ ಸಂಬಳ ತಗೋಬೇಕು ತಾನೇ ?

ರಾಜ : ನಂಗೆ ಬೇಡಾ

ರಾಜಣ್ಣ : ಮತ್ತೆ ನಮ್ಮ ಸಾಕೋರು ಯಾರು ?

ರಾಜ : ನಾನ್ಯಾಕೆ ಸಾಕಬೇಕು ?

ರಾಜಣ್ಣ : ನೀನು ನಮ್ಮಗ ಅಲ್ಲವೇನೋ ? ಕೊನೆಗಾಲದಲ್ಲಾಗಲಿ ನೀನೇ ತಾನೇ ನಮ್ಮನ್ನ ಸಾಕೋದು. ನೀನಲ್ಲೇ ನಮಗೆ ಬೇರೆ ಯಾರೋ ದಿಕ್ಕು ?

ರಾಜ : ಅದೆಲ್ಲ ನಂಗೊತ್ತಿಲ್ಲ.

ರಾಜಣ್ಣ : ಸುಮ್ಕೆ ಎದ್ದು ಇಸ್ಕೂಲಿಗೆ ಓಗೋ ನಿಂದೂ ಅತಿಯಾಯ್ತು.

ರಾಜ : ಹೋಗಾಕಿಲ್ಲ ಅಂದ್ರೆ ಹೋಗಾಕಿಲ್ಲ.

ರಾಜಣ್ಣ : ಈವಾಗ ಎದ್ದು ಬಂದ್ರೇ....

ರಾಜ : ಅವ್ವಾ... ಅಪ್ಪ ಬೈತರೇ.

ತಾಯಿ : ಏ.... ಸುಮ್ಮೆ ಅವ್ನ ಬುಡಿ ಅತ್ತಗೆ

ಗಂಗೆ : ಅಪ್ಪಾ....ಅಪ್ಪಾ

ರಾಜಣ್ಣ : ಏನವ್ವಾ ?

ಗಂಗೆ : ನಾನೂ ಇಸ್ಕೂಲಿಗೆ ಓಯ್ತೀನಿ.

ರಾಜಣ್ಣ : (ನಗುತ್ತಾ) ನೀನಾ ? ಯಾಕೆ ?

ಗಂಗೆ : ನಾನು ಇಸ್ಕೂಲ್‌ಗೆ ಹೋಗಿ ಚೆನ್ನಾಗಿ ಓದಿ ದೊಡ್ ಕೆಲ್ಸಕ್ಕೆ ಸೇರ್ಕಂಡು ದೊಡ್ ಸಂಬಳ ತಗೊಂಡು ನಿಮ್ಮುನ್ನ ಕೊನೆಗಾಲದಲ್ಲಿ ನೋಡ್ಕೋತೀನಿ.

ರಾಜಣ್ಣ : (ಜೋರಾಗಿ ನಗುತ್ತಾ) ನೋಡ್ದೇನೇ ಇವ್ಳು ಹೇಳೋ ಮಾತಾ ? ನೀನಾ ಹೇಳೀ ಕೇಳೀ ಹೆಣ್ಣು ಹುಡುಗಿ. ನೀನು ಓದ್ತಿಯಾ ? ಇನ್ನೆಲ್ಡು ವರ್ಸ ಆದ್ರೆ ಮದುವೆ ಮಾಡಿಕೊಂಡ್ ರೈಟ್ ಹೇಳ್ತಾರ್ತೀಯಾ, ನೀನು ನಮ್ಮನ್ನೇನ್ ಸಾಕ್ತೀಯಾ ಬುಡುವ್ವ, ಸುಮ್ಕೆ ಮನೆ ಕೆಲ್ಸ ಕಲ್ತುಕೋ. ಓದು ಬುಟ್ರೆ ಒಲೆ ಊದೋದು ತಪ್ತದಾ ? ನಿನ್ ಗಂಡನ ಮನಿಯೋರು ಆಮೇಲೆ ನಿಮ್ಮುಡುಗಿಗೆ ಮನೆ ಕೆಲ್ಸ ಕಲಿಸಿಕೊಟ್ಟಿಲ್ಲ ಅಂತ ಹಂಗಿಸ್ತಾರು. ಓಗು ಅಡಿಗೆ ಮನೆಗೆ ಅವ್ವನ ಜ್ಯೊತೆ ಕೆಲ್ಸ ಮಾಡು. ಓಗು... ನಡಿಯೋ ರಾಜಾ, ಇಸ್ಕೂಲಿಗೆ ಬುಟ್ಟು ಬತ್ತೀನಿ.

ರಾಜಾ : ನಾನು ಓಗಲ್ಲ (ಅಳುತ್ತಾನೆ)

(ರಾಜಣ್ಣ ಅವನನ್ನು ಬಲವಂತವಾಗಿ ಎಳೆದುಕೊಂಡು ಹೋಗುತ್ತಾನೆ. ಗಂಗೆ ಅವನನ್ನೇ ನೋಡುತ್ತಾ ನಿಲ್ಲುತ್ತಾಳೆ)

ಶಾಂತವ್ವನ ಧ್ವನಿ : ಏ ಗಂಗೀ..... ಬಾರೇ ವಸಿ ಕಾರ ಅರೆದು ಕೊಡು ಬಾ ಆಗ್ಲೇ ಒತ್ತಾಯ್ತು. ಇನ್ನೂ ಹುಲ್ಲು ಬೇರೆ ತಂದಿಲ್ಲ. ಬಿರ್‌ನ ಬಾ....

ಹಾಡು -

ಗಂಡು ಮಗನ ಕೈಗೆ
(ಹಲಗೆ) ಸ್ಲೇಟು ಬಳಪ ಪುಸ್ತಕ
ಹೆಣ್ಣು ಮಗಳ ಕೈಗೆ
ಸೌಟು ಪೊರಕೆ ಬೇಕಾ
ಇವರು ಎರಡು ಕಣ್ಣುಗಳು
ಭೇದವೇಕೆ ಅಣ್ಣಾ
ಯಾವ ನ್ಯಾಯವಿದು ಹೇಳಿರಣ್ಣಾ

## ದೃಶ್ಯ - ಐದು

(ಬಾವಿಕಟ್ಟೆ ಬಳಿ ಗಾಂಗಾ ಜಮುನಾ)

ಜಮುನಾ : ನಾಳೆಯಿಂದ ನಾನು ಸ್ಕೂಲಿಗೆ ಹೋಗ್ತಾ ಇದ್ದೀನಿ.

ಗಂಗೆ : ನಿಂದೇ ಪುಣ್ಯ ಕಣೇ

ಜಮುನಾ : ನೀನೂ ಹಠ ಹಿಡಿಯೇ ಸ್ಕೂಲಿಗೆ ಹೋಗಬೇಕು ಅಂತ.

ಗಂಗೆ : ನಮ್ಮಪ್ಪ ಬೇಡಾ ಅಂದುಬಿಟ್ರು. ಹೆಣ್ಣು ಮಕ್ಕಳಿಗ್ಯಾಕೆ ಓದು, ಸುಮ್ನೆ ಮನೆ ಕೆಲ್ಸ ಕಲ್ತಿಕೋ ಅಂದ್‌ಬುಟ್ರು.

ಜಮುನಾ : ನಮ್ಮಪ್ಪ ಹಂಗಲ್ಲಪ್ಪಾ ಸದ್ಯ

ಗಂಗೆ : ಅಷ್ಟೇ ಅಲ್ಲ, ಯಾವಾಗ ನೋಡಿದ್ರೂ ನೀನು ಹೆಣ್ಣುಡುಗಿ ನಿಂಗ್ಯಾಕೆ ಅಂತ ಅಂದೂ ಅಂದೂ..... ಮೊನ್ನೆ ಪೇಟೆಯಿಂದ ಅಪ್ಪ ಜಿಲೇಬಿ ತಂದಿದ್ರು ರಾಜಂಗೆ ಮಾತ್ರ ಕೊಟ್ರು, ನಂಗೆ ಕೊಡ್ಲೇ ಇಲ್ಲ. ದಿನ ಅವನಿಗೆ ಬಿಸಿ ಅನ್ನ ಕೊಡ್ತಾರೆ ನಂಗ್ ಮಾತ್ರ ತಂಗಳನ್ನ, ಮೊನ್ನೆ ಹಬ್ಬಕ್ಕೆ ಅವನಿಗೆ ಮಾತ್ರ ಹೊಸ ಬಟ್ಟೆತಂದ್‌ಕೊಟ್ರು ನಂಗೆ ಏನೂ ಇಲ್ಲ, ನಾನೇನು ಅವರ ಮಗಳಲ್ವಾ, ಯಾಕ್ ಹೀಗ್ ಮಾಡ್ತಾರೋ ಮಗಳಾಗಿದ್ದೇ ತಪ್ಪಾ ?

ಹಾಡು -

ಮಗಳಾಗಿದ್ದೇ ತಪ್ಪಾ
ಮಗನಾಗಿದ್ದೇ ಒಪ್ಪಾ
ಹೆಣ್ಣುಗಂಡಲ್ಲಿ ಭೇದವು ಯಾಕೆ
ತಾರತಮ್ಯವು ಬೇಕೇ ?

## ದೃಶ್ಯ - ಆರು

ನಿರೂಪಕಿ : ಹೀಗೇ ಗೆಳತಿಯರು ಬೆಳೆದು ದೊಡ್ಡವರಾದರು. ಗಂಗೆ ಮನೆ ಕೆಲಸಕ್ಕೆ ಮೀಸಲಾದಳು. ಜಮುನಾ ಶಾಲೆಗೆ ಹೋಗಿ ಚೆನ್ನಾಗಿ ಕಲಿತಳು. ಜಮುನಾ ತಂದೆ ತಾಯಿ ಮಗಳ ಬಗ್ಗೆ ಹೆಮ್ಮೆಪಟ್ಟರು. ಗಂಗೆ ತಂದೆ ತಾಯಿ ಮಗಳೆಂದರೆ ಹೊರೆ ಎಂದು ಕೊಂಡರು. ಆದಷ್ಟು ಬೇಗ ಈ ಹೊರೆ ಕಳಚಿಕೊಳ್ಳಬೇಕು ಅಂತ ಚಡಪಡಿಸಿದರು. ಹೊರೆ ಕಳಚಿಕೊಳ್ಳೋದೂ ಅಂದರೆ ಏನು ? ಮಗಳನ್ನು ಸಾಗ ಹಾಕೋದು. ಅದಕ್ಕೆ ತುಂಬ ಸುಲಭದ ದಾರಿ ಯಾವುದು ? ಮದುವೆ ಮಾಡೋದು -.

ರಾಜಣ್ಣ : ಏ.... ಇವಳೇ ಬಾ ಇಲ್ಲಿ.

ಶಾಂತಮ್ಮ : ಏನ್ರೀ ?

ರಾಜಣ್ಣ : ಒಳ್ಳೇ ಸುದ್ದಿ

ಶಾಂತಮ್ಮ : ಒಳ್ಳೇ ಸುದ್ದೀನಾ ! ಏನದು ?

ರಾಜಣ್ಣ : ಗಂಗೆಗೆ ಸಂಬಂಧ ಬಂದಿದೆ.

ಶಾಂತಮ್ಮ : ಹೌದಾ ! ಯಾರು ? ಎಲ್ಲಿಯವರು ?

ರಾಜಣ್ಣ : ಕನಕನಪಾಳ್ಯದ ಸುಬ್ಬಣ್ಣ ಇಲ್ಲೇನು ಅವರ ತಂಗಿ ಮಗ.

ಶಾಂತಮ್ಮ : ಒಳ್ಳೇ ಸಂಬಂಧ

ರಾಜಣ್ಣ : ಭಾನುವಾರ ಅವರು ಮಾತುಕತೆಗೆ ಬರ್ತಾ ಇದ್ದಾರೆ.

ಶಾಂತಮ್ಮ : ಹೌದಾ ? ಎರಡೇ ದಿನ ?

(ಎರಡು ದಿನದ ನಂತರ)

(ಹುಡುಗ, ತಂದೆ, ತಾಯಿ, ಮಧ್ಯವರ್ತಿ ಬರುತ್ತಾರೆ)

ರಾಜಣ್ಣ : ಬನ್ನಿ ಬನ್ನಿ ಕೂತ್ಕೊಳ್ಳಿ, ಇವಳೇ ನೀರು ಕೊಡೇ.

ಶಾಂತವ್ವ : (ಚೊಂಬಿನಲ್ಲಿ ನೀರು ತರುತ್ತಾಳೆ)

(ಗಂಗೆಯನು ತೋರಿಸುತ್ತಾರೆ)

(ಮಧ್ಯವರ್ತಿ ಹುಡುಗನ ತಂದೆ ಕಡೆ ನೋಡುತ್ತಾನೆ. ಅವರು ಸನ್ನೆ ಮಾಡುತ್ತಾರೆ. ಮಧ್ಯವರ್ತಿ ಎದ್ದು ಹೋಗಿ ಅವರ ಬಾಯಿ ಬಾಗುತ್ತಾನೆ. ಅವರು ಪಿಸುಗುಡುತ್ತಾರೆ. ಮಧ್ಯವರ್ತಿ ಮತ್ತೆ ತನ್ನ ಜಾಗಕ್ಕೇ ಬಂದೂ ಕೂರುತ್ತಾನೆ.)

ಮಧ್ಯವರ್ತಿ : ನೋಡೀ ಅವರಿಗೆ ಹುಡುಗಿ ಒಪ್ಪಿಗೆಯಾಗಿದೆ. (ರಾಜಣ್ಣ, ಶಾಂತಮ್ಮ ಸಂತೋಷಪಡುತ್ತಾರೆ) ಈಗ ಕೊಡೋ ತಗೋಳ್ಳ ಮಾತು ಮುಗಿಸಿ ಬಿಡಿ. ಹುಡುಗ ಎಸ್.ಎಸ್.ಎಲ್.ಸಿ. ಓದಿ ಬಂದಿದ್ದಾನೆ. ಅವನಿಗೆ ಅಂಗಡಿ ಹಾಕಿಕೊಡಬೇಕಂತ ಇದ್ದೀವಿ. ಇಪ್ಪತ್ತೈದು ಸಾವಿರ ನಗದು, ಎರಡು ತೊಲ ಚಿನ್ನ ಜೊತೆಗೆ ಒಂದು ಸ್ಕೂಟರ್ ಕೊಡಿಸಬೇಕು.

ರಾಜಣ್ಣ : (ಕುಗ್ಗುತ್ತಾ) ಅಯ್ಯೋ ನನ್ ಕೈಲಿ ಅಷ್ಟೆಲ್ಲಾ ಎಲ್ಲಾಗುತ್ತೆ ? ನಾನು ಬಡವ.

ಮಧ್ಯವರ್ತಿ : (ಗಂಡಿನ ತಂದೆ ಕಡೆ ಒಮ್ಮೆ ನೋಡಿ) ನೋಡ್ರೀ ಇದರಲ್ಲೆಲ್ಲ ಚೌಕಾಸಿ ಇಲ್ಲ. ಅವರೇನೂ ಬೇರೆ ಎಲ್ಲೂ ಹೆಣ್ಣು ಸಿಕ್ಕಿಲ್ಲ ಅಂತ ನಿಮ್ ಮನೇ ಬಾಗಿಲಿಗೆ ಬರಲಿಲ್ಲ. ಈಗ ಅಂದ್ರೆ ಈಗ ಹೆಣ್ಣುಗಳ ಸಾಲು ಅವರ ಮುಂದೆ ನಿಲ್ಲಿಸ್ತೀನಿ. ನೀವು ಏನ್ ಹೇಳ್ತೀರೋ ಹೇಳಿ ಬಿಡಿ.

ರಾಜಣ್ಣ : ಅಷ್ಟು ದುಡ್ಡು ನಾನು ಎಲ್ಲಿಂದ ತರಲಿ ? ರಾಮಣ್ಣ ?

ಗಂಡಿನ ತಂದೆ (ಎದ್ದುನಿಂತು) : ಸರಿ ನೀವು ಅದರ ಚಿಂತೆ ಮಾಡ್ತೀರಿ, ನಾವು ಹೊರಡ್ತೀವಿ. ಏಳೋ ಮೇಲೆ, ಏಳೇ (ಹುಡುಗ, ತಾಯಿ ಇಬ್ಬರೂ ಏಳುತ್ತಾರೆ)

ರಾಜಣ್ಣ : ಅಲ್ಲಾ..... ಅಲ್ಲಾ.....

(ಅವರ ಮಾತಿಗೆ ಕಾಯದೆ ಎಲ್ಲ ಹೊರಟುಬಿಡುತ್ತಾರೆ)

## ದೃಶ್ಯ - ಏಳು

(ರಾಜಣ್ಣನ ಮನೆಗೆ ಕೃಷ್ಣಪ್ಪ ಬರುತ್ತಾನೆ)

ಕೃಷ್ಣಪ್ಪ : ನೋಡಪ್ಪಾ ರಾಜಣ್ಣಾ, ಹೆಣ್ಣು ಮಕ್ಕಳಿಗೆ 18 ತುಂಬಕ್ಕೆ ಮೊದಲು ಮದುವೆ ಮಾಡೋದು ಅಪರಾಧ. ನಿಂಗೆ ಶಿಕ್ಷೆ ಆಗುತ್ತೆ.....

ರಾಜಣ್ಣ : ಮಗಳು, ನನ್ ಮಗಳು ಅವಳಿಗೆ ನಾನು ಯಾವಾಗ ಬೇಕಾದ್ರೂ ಮದುವೆ ಮಾಡ್ತೀನಿ. ಅದನ್ನು ತಡಿಯೋದು ಯಾರು ? ನನಗ್ಯಾರು ಶಿಕ್ಷೆ ಕೊಡೋರು ಹೋಗ್ ಹೋಗ್ರೀ... ಸುಮ್ಮೆ ಏನೋ ಹೇಳಕ್ಕೆ ಬರಬೇಡಿ.

ಕೃಷ್ಣಪ್ಪ : ಹೆಣ್ಣು ಮಕ್ಕಳಿಗೆ 18 ವರ್ಷಕ್ಕೆ ಮೊದಲು ಮದುವೆ ಮಾಡಬಾರದು ಅಂತ ಕಾನೂನು ಇದೆ. ಚಿಕ್ಕ ಹುಡುಗಿಗೆ ಮದುವೆ ಮಾಡಿದ್ರೆ ಪೊಲೀಸ್ ಬಂದು ನಿನ್ನನ್ನು ಎಳಕೊಂಡು ಹೋಗ್ತಾರೆ ಜೈಲಿಗಾಗ್ತಾರೆ ನಿನಗೆ.

ರಾಜಣ್ಣ : ಅಲ್ಲಪ್ಪಾ ಕೃಷ್ಣಪ್ಪ, ನಿಮ್ ಮಗಳ್ನ ಸ್ಕೂಲಿಗೆ ಕಳಿಸಿ ಇನೆಲ್ಲಿಗೋ ಕಳಿಸಿ ನಾನೇನೂ ಬ್ಯಾಡಾ ಅನ್ನಲ್ಲ. ನಮ್ ಮನೆ ಮಗಳಿಗೆ ನಾವು ಹಾಗೆಲ್ಲಾ ಕಳಿಸಲ್ಲ. ನಿಮ್ ಮಗಳಿಗೆ ಹದಿನೆಂಟಾದರೂ ಸರಿ, ಇಪ್ಪತ್ತಾದರೂ ಸರಿ ಅಲ್ಲಾ ಮುದುಕಿ ಆದ ಮೇಲಾದರೂ ಸರಿ ನಿಮಗಿಷ್ಟ ಬಂದ ಹಾಗೆ ಮದುವೆ ಮಾಡಿ. ನನ್‌ಮಗಳಿಗೆ ನಾನು ಈಗಲೇ ಮದುವೆ ಮಾಡೋದು. ಅದ್ಯಾರು ನನ್ ಏನ್ ಮಾಡ್ತಾರೋ ನೋಡ್ತೀನಿ. ನಾವು ಸರೀಕರ ಎದುರಿಗೆ ತಲೆ ಎತ್ತಿಕೊಂಡು ಓಡಾಡಬೇಕೋ ಇಲ್ವೋ ? ಬೆಳೆದ ಮಗಳ್ನ ಮನೇಲಿ ಇಟ್ಕೊಂಡ್ರೆ ಜನ ಏನಂತಾರೆ ? ನಿಮ್ಮ ನಂಬಿ ಉಪದೇಶ ಮಾಡಕ್ಕೆ ಬರಬೇಡಿ ; ನಿಮ್ ದಾರಿ ಹಿಡಿದು ನೀವ್ ಹೋಗಿ.

(ಕೃಷ್ಣಪ್ಪ ಹತಾಶನಾಗಿ ಹೊರಟು ಹೋಗುತ್ತಾನೆ.)

## ದೃಶ್ಯ - ಎಂಟು

(ಜಮುನಾ ಮನೆ, ಹೆಂಗಸೊಬ್ಬಳು ಬಂದು ಗೌರವ್ವನ ಹತ್ತಿರ ಜಮುನಾ ಮದುವೆ ಪ್ರಸ್ತಾಪ ಮಾಡುತ್ತಾಳೆ)

ಹೆಂಗಸು : ಗೌರವ್ವ, ನಿಮ್ ಜಮುನಾಗೆ ಮದುವೆ ಗಿದುವೆ ಮಾಡೋ ಯೋಚನೆ ಇಲ್ಲೇನು?

ಗೌರವ್ವ : ಇಲ್ದೇ ಏನು, ಹೆಣ್ಣು ಮಗಳು ಅಂದ ಮೇಲೆ ಮದುವೆ ಮಾಡಿಕೊಡಬೇಕಲ್ಲ.

ಹೆಂಗಸು : ಎರಡು ಸಂಬಂಧ ನನಗೆ ಗೊತ್ತಿದೆ. ಕರಸಲೇನು ?

ಗೌರವ್ವ : ಈಗ ? ಜಮುನಾಗೆ ಇನ್ನೂ ಹದಿನೆಂಟು ತುಂಬಿಲ್ಲ ; ಅಷ್ಟು ಬೇಗನೇ ಮದುವೆ ಮಾಡೋದು ಕಾನೂನು ಪ್ರಕಾರ ಅಪರಾದ, ಇನ್ನೂ ಒಂದೆರಡು ವರ್ಷ ತಡೀರಿ.

ಹೆಂಗಸು : ಅಲ್ಲಾ ಏನ್ ಗೌರವ್ವ, ನೀನೂ ಇದೇ ಮಾತ್ ಹೇಳ್ತೀಯೇನು ?

ಗೌರವ್ವ : ಇನ್ಯಾರು ಹೇಳಿದ್ರು ಈ ಮಾತ್ನಾ ?

ಹೆಂಗಸು : ಮೊನ್ನೆ ಅಲ್ಲಿ ಹತ್ತೊರ್ಸದ ಹುಡುಗಿಗೆ ಮದುವೆ ಮಾಡಕ್ಕೆ ಹೊರಟಿದ್ರು, ಆಗ ಪೊಲೀಸು, ಸ್ತ್ರೀಶಕ್ತಿ ಗುಂಪಿನವರೆಲ್ಲ ಬಂದು ಮದುವೆ ನಿಲ್ಲಿಸಿದ್ರು.

ಗೌರವ್ವ : ಹೌದೇನು ? ಒಳ್ಳೇದಾಯ್ತು. ಎಳೀ ಹುಡುಗೀಗೆ ಮದುವೆ ಮಾಡೋದು ಅವರ ದೇಹ ಇನ್ನೂ ದಾಂಪತ್ಯ ಜೀವನಕ್ಕೆ ತಯಾರಾಗಿರುವುದಿಲ್ಲ. ಎಳೀ ಗಿಡ ಕಾಯಿ ಕೊಡ್ತದೇನು ? ಹದಿನೆಂಟು ತುಂಬಿದ ನಂತರವೇ ಮದುವೆ.

## ದೃಶ್ಯ - ಒಂಬತ್ತು

(ಗಂಗೆಯನ್ನು ನೋಡಲು ಇನ್ನೊಬ್ಬ ವರ ಬಂದಿದ್ದಾನೆ)

ಮಧ್ಯವರ್ತಿ : ನೋಡಪ್ಪಾ ಸಿದ್ಧಪ್ಪಾ, ಹುಡುಗಿ ಒಬ್ಬಳೇ ಮಗಳು. ಕೈಲಾದಷ್ಟು ಕೊಟ್ಟು ಮದುವೆ ಮಾಡ್ತಾನೆ ರಾಜಣ್ಣ. ನೀನು ಗಟ್ಟಿ ಮನಸ್ಸಿನಿಂದ ಒಂದೇ ಸಲಕ್ಕೆ ಹೂಂ ಅಂದುಬಿಡು ನೀನೂ ಎಷ್ಟುದಿನ ಕೈ ಸುಟ್ಟುಕೋತೀಯಾ ?

ಶಾಂತವ್ವ : ಯಾಕಪ್ಪಾ ನಿಮ್ಮವ್ವ ಇಲ್ಲವೇನು ?

ಮಧ್ಯವರ್ತಿ : ಇಲ್ಲರೀ, ಅವರವ್ವ ತೀರಿಕೊಂಡು ಎರಡು ವರ್ಸ ಆತು. ಹೆಂಡತಿ ತೀರಿಕೊಂಡು ಒಂದು ವರ್ಸ ಆತು.

ಶಾಂತವ್ವ / ರಾಜಣ್ಣ : ಹೆಂಡತಿ ?

ಮಧ್ಯವರ್ತಿ : ಹೇಳಿದನಲ್ರೀ ? ಮೊದಲನೇ ಹೆಂಡ್ತಿ ತೀರಿಕೊಂಡಿದ್ದಾಳೆ. ಅದಕ್ಕೆ ಒಂದು ವರ್ಷದಿಂದ ಸ್ವಂತ ಅಡಿಗೆ ಮಾಡಿಕೊಂಡು ಸಾಕಾಗಿ ಮತ್ತೆ ಮದುವೆ ಆಗಕ್ಕೆ ಹೊರಟರೋದು.

ರಾಜಣ್ಣ : ಮಕ್ಕಳಾದವೇನು ?

ಮಧ್ಯವರ್ತಿ : ಇಲ್ಲ ಇಲ್ಲ ಮಕ್ಕಳಿಲ್ಲ.

ಶಾಂತವ್ವ : ಒಳ್ಳೇದಾಯ್ತು, ಹಂಗೆ ನೋಡಿದ್ರೆ ನಮ್ ಗಂಗೆ ಒಳ್ಳೇವಳೇ ಮಕ್ಕಳಿದ್ರೂ ಅವಕ್ಕೆ ತಾಯಾಗಿರ್‍ತಿದ್ಲು ಬಿಡ್ರೀ.

ಮಧ್ಯವರ್ತಿ : ಹಂಗಾದ್ರೆ ಮದುವೆ ಪಕ್ಕಾ ಆದಂಗೇನು ? ನೀವು ಏನು ಕೊಡ್ತೀರೋ ಹೇಳಿಬಿಡ್ರಿ.

ರಾಜಣ್ಣ : ನೀವು ಏನು ಕೇಳ್ತೀರೋ ನೋಡ್ರಿ ಆಮೇಲೆ ಮಾತು ಬರಬಾರದು.

ಮಧ್ಯವರ್ತಿ : ಬೇರೆ ಏನಿಲ್ಲ. ಸಿದ್ದಪ್ಪಂಗೆ ಒಂದು ಸ್ಕೂಟರ್ ಕೊಡಬೇಕು. ಹುಡುಗಿಗೆ ಎರಡು ತೊಲ ಚಿನ್ನ ಹಾಕಬೇಕು ಅಷ್ಟೇ ಹೆಚ್ಚೇನಿಲ್ಲ.

ರಾಜಣ್ಣ<br>ಶಾಂತಮ್ಮ : (ಮುಖ ಮುಖ ನೋಡಿಕೊಂಡು) - ಆಯ್ತು ಬಿಡ್ರೀ.

### ದೃಶ್ಯ - ಹತ್ತು

(ಶಾಂತವ್ವ ಅಕ್ಕಿ ಕೇರುತ್ತಾ ಕೂತಿದ್ದಾಳೆ. ಗಂಗೆ ಬರುತ್ತಾಳೆ.)

ಗಂಗೆ : ಅವ್ವಾ.

ಶಾಂತವ್ವ : ಏನವ್ವಾ ?

ಗಂಗೆ : ಅವ್ವನಂಗೆ ಈ ಮದುವೆ ಬೇಡಾ.

ಶಾಂತವ್ವ : ಯಾಕೆ ? ಯಾಕ್ ಬೇಡಾ ? ಸಿದ್ದಪ್ಪ ಒಪ್ಪಿದ್ರೆ ದೊಡ್ಡ್ ಮಾತು. ಅವನಿಗೆ ಮಕ್ಕಳು ಬೇರೆ ಇಲ್ಲ. ಎರಡನೇ ವರ ಆದ್ರೂ ಪರವಾಗಿಲ್ಲ.

ಗಂಗೆ : ಅವನು ಕುಡೀತಾನೇ. ಅವನ ಮೊದಲನೇ ಹೆಂಡತಿ ಹೆಂಗ್ ಸತ್ಲು ಅಂತ ಊರವರು ಏನೇನ್ ಮಾತಾಡ್ತಾರೆ ಗೊತ್ತಾ ?

ಶಾಂತವ್ವ : ಅದೆಲ್ಲ ಕಟ್ಟಿಕೊಂಡು ನಿಂಗೇನು ? ಗಂಡಸರು ಅಂದ ಮೇಲೆ ಕುಡಿತಗಿಡಿತ ಎಲ್ಲ ಇದ್ದದ್ದೇ. ಊರವರ ಮಾತು ಯಾಕೆ ಕೇಳಕ್ಕೆ ಹೋಗಿದ್ದೆ ನೀನು ?

ಗಂಗೆ : ಅವನು ಒಂದೊರ್ಸ ಯಾರ್‍ಯಾರದೋ ಸಹವಾಸ ಮಾಡ್ಕೊಂಡಿದ್ದ ಗೊತ್ತಾ ?

ಶಾಂತವ್ವ : ಇರಬಹುದು. ಮದುವೆ ಆಗಿರಲಿಲ್ಲ ಅಂತ ಹೊರಗೆ ಹೋಗ್ತಿದ್ದಾನೇನೋ ಮದುವೆ ಆದ ಮೇಲೆ ಎಲ್ಲ ಸರಿ ಹೋಗುತ್ತೆ.

ಗಂಗೆ : ನಂಗೆ ಬೇಡಾ ಅವ್ವ.

ಶಾಂತವ್ವ : ನಿನ್ನನ್ನ ಕೇಳಿ ಯಾರು ಮದುವೆ ಮಾಡ್ತಾರೆ ? ಕೋಳೀನ್ ಕೇಳಿ ಮಸಾಲೆ ಅರೀತಾರೇನು ? ನಿಮ್ಮಪ್ಪ ನಿಶ್ಚಯ ಮಾಡಿದ ಮೇಲೆ ಮುಗೀತು ಮದುವೆ ಆದ ಹಾಗೇ ಲೆಕ್ಕ.

### ದೃಶ್ಯ – ಹನ್ನೊಂದು

ಸಿದ್ದಪ್ಪ : ಗಂಗಾ.....ಏ ಗಂಗೀ.. ಎಲ್ ಹಾಳಾಗಿ ಹೋದ್ಯೇ ?

ಗಂಗೆ : ಏನು ? (ಬರುತ್ತಾ)

ಸಿದ್ದಪ್ಪ : ನಿಮ್ಮಪ್ಪ ಎಡು ತೊಲ ಚಿನ್ನ ಕೊಡ್ತೀನಿ ಅಂತ ಒಂದು ತೊಲ ಮಾತ್ರ ಕೊಟ್ಟ ಸ್ಕೂಟರ್ ಕೊಡ್ತೀನಿ ಅಂತ ಹೇಳಿ ಅದು ಯಾವುದೋ ಲಡಕಾಸಿ ಹಳೇ ಗಾಡಿ ಕೊಟ್ಟ. ಮದುವೆಯಾಗಿ ಒಂದು ವರ್ಷ ಆಯ್ತು ಇನ್ನೂ ಒಂದು ತೊಲ ಕೊಡೋದ್ರಲ್ಲೇ ಅವ್ನೆ. ಹೋಗೇ ಹೋಗಿ ನಿಮ್ಮಪ್ಪನ ತಾವ ಒಂದ್ ತೊಲ ಚಿನ್ನ ಇಸ್ಕಂಡ್ ಬಾ.

ಗಂಗೆ : ನಮ್ಮಪ್ಪ ಎಲ್ಲಿಂದ ಕೊಡ್ತಾನ್‌ರೀ ?

ಸಿದ್ದಪ್ಪ : ಕೊಡದಿದ್ರೆ ನೀನ್ ಅಲ್ಲೇ ಬಿದ್ದಿರು ನಾನು ಬೇರೆ ಮದುವೆ ಮಾಡ್ಕೋತೀನಿ ಬಿಟ್ಟಿ ಸಿಕ್ಕಿ ಬಿಟ್ಟ ಅಂತ ನಂಗೇ ಮೋಸ ಮಾಡಕ್ಕೆ ನೋಡ್ತೀರಾ ಅಪ್ಪ ಮಗಳು ? (ಬಂದು ಹೊಡೆಯುತ್ತಾನೆ)

(ಗಂಗೆ ಅಳುತ್ತಾಳೆ)

### ದೃಶ್ಯ – ಹನ್ನೆರಡು

ನಿರೂಪಕಿ : ವರದಕ್ಷಿಣೆ ಕೇಳೋದು ಕಾನೂನು ಪ್ರಕಾರ ಅಪರಾಧ. ವರದಕ್ಷಿಣೆ ಕೊಟ್ಟರೆ ಏಳುವರ್ಷ ಜೈಲು ಶಿಕ್ಷೆ ಆಗಬಹುದು. ಕಾನೂನು ಇದರ ಬಗ್ಗೆ ಕಟ್ಟುನಿಟ್ಟಾಗಿದ್ದರೂ. ಅದರ ಬಗ್ಗೆ ಅಲಕ್ಷ್ಯ ಮಾಡಿದ ಜನ ಒಂದಲ್ಲ ಒಂದು ದಿನ ಕಾನೂನಿನ ವಜ್ರ ಮುಷ್ಠಿಗೆ ಸಿಕ್ಕಿ ಬಿದ್ದೇ ಬೀಳುತ್ತಾರೆ.

ಆದರೆ ಅಷ್ಟರಲ್ಲಿ ಎಳೇ ಹುಡುಗಿಯಾದ ಗಂಗಾ ದೈಹಿಕ ಶ್ರಮದ ಜೊತೆಗೆ ಕೌಟುಂಬಿಕ ಕಾರ್ಯವನ್ನೂ ವಹಿಸಿಕೊಳ್ಳಲಾಗದೇ ಸೊರಗಿದ್ದಾಳು. ಅವಳಿಗೆ ಸರಿಯಾದ ಊಟ, ತಿಂಡಿ, ವಿಶ್ರಾಂತಿ ಇಲ್ಲದೇ, ವೈದ್ಯಕೀಯ ಚಿಕಿತ್ಸೆಯೂ ಇಲ್ಲದೇ ಅವಳ ಗರ್ಭ ಜಾರಿಹೋಯಿತು. ಹೆಣ್ಣು ಸುರಕ್ಷಿತವಾಗಿ ಹಡೆಯಬೇಕಾದರೆ ಮನೆಯವರ ಸಹಕಾರ ಬೇಕು. ಸುರಕ್ಷಾ ಹೆರಿಗೆಯ ಪ್ರಯೋಜನ ಪಡೆಯುವ ಅವಕಾಶವಿದ್ದರೂ ಗಂಗೆ ಅದರಿಂದ ವಂಚಿತಳಾಗಿ ತವರು ಮನೆಗೆ ಬಂದಳು

(ಹಿಂದೆ ಸರಿಯುತ್ತಾಳೆ)

ಗಂಗೆ : (ಬರುತ್ತಾಳೆ ಸೋತ ನಾಚಿಕೆಯಲ್ಲಿ)

ರಾಜಣ್ಣ : ಏನವ್ವಾ, ಗಂಗಾ, ಒಬ್ಬಳೇ ಬಂದೀ.

ಗಂಗೆ : ಜೊತೆಗೆ ಯಾರಿದ್ದಾರಪ್ಪಾ ?

ರಾಜಣ್ಣ : ಸಿದ್ಧಪ್ಪ ಬರಲಿಲ್ಲವೇನು ?

ಗಂಗೆ : ನೀನು ಚಿನ್ನ ಕೊಡುವವರೆಗೆ ಈ ಮನೆಗೆ ಕಾಲಿಡಲ್ಲ ಅಂತ ಹೇಳಿದ್ದಾರೆ.

ರಾಜಣ್ಣ : (ಕುಸಿಯುತ್ತಾನೆ)

ಗಂಗೆ : ನಾನು ಬೇಡಾ ಅಂದೆ, ಕೇಳಿದಿರಾ ?

ಶಾಂತವ್ವ : ನೀನು ಬೇಡಾ ಅಂದೆ ಅಂತ ನಿನ್ನನ್ನ ಮನೇಲೇ ಇರಿಸ್ಕಳಕ್ಕೆ ಆಯ್ತದಾ ಮಗಳೇ ? ಹೆಂಗಾದ್ರೂ ಮಾಡಬೇಕು. ಏನು ಮಾಡೋದು ?

ಗಂಗೆ : ನೀವ್ ಏನಾದ್ರೂ ಮಾಡಿ. ಮಾಡೀ ಮಾಡೀ ಗಂಗೇ ಸವೆದು ಹೋಗೋರಂತೆ.

ರಾಜಣ್ಣ : ಬುಡ್ತು ಅನ್ನವ್ವ

(ಗಂಗೆ ವಿಷಾದದ ನಗೆ ನಗುತ್ತಾಳೆ)

## ದೃಶ್ಯ - ಹದಿಮೂರು

(ಜಮುನಾ ಮತ್ತು ಗಂಗೆ. ಗಂಗೆ ಸುಸ್ತಾಗಿದ್ದಾಳೆ. ಜಮುನಾ ನಳನಳಿಸುತ್ತಿದ್ದಾಳೆ)

ಜಮುನಾ : ಏನೇ ಗಂಗಾ, ಹೀಗಾಗಿ ಹೋಗಿದ್ದೀಯಾ ? ಬೇಗ ಮುದುಕಿ ಆಗಿ ಬಿಡ್ತೀಯಾ

ಗಂಗೆ : ಆಗ್ಲೇ ಮುದುಕಿ ಆಗಿ ಹೋಗಿದ್ದೀನಿ ಬಿಡು ನನ್ ಕತೆ ಬಿಡು. ನಿನ್ನನ್ನ ನೋಡಿದ್ರೆ ಎಷ್ಟು ಸಂತೋಷ ಆಗುತ್ತೆ.

ಜಮುನಾ : ನಂಗೆ ಮದುವೆ ನಿಶ್ಚಯ ಮಾಡಿದ್ದಾರೆ ಕಣೇ.

ಗಂಗೆ : ಹೌದಾ ? ಯಾರು ವರ ?

ಜಮುನಾ : ಕಲ್ಲಳ್ಳಿ ಹೈಸ್ಕೂಲ್ ಟೀಚರ್.

ಗಂಗೆ : ಹೌದಾ ? ಅಪತ್ತು ಕಲ್ಲನಳ್ಳಿಯಿಂದ ಒಂದು ಪ್ರಸ್ತಾಪ ಬಂದಿತ್ತಲ್ಲ ಅದೇನಾಯ್ತು ?

ಜಮುನಾ : ಓ ಅದಾ ? ನಾನೇ ಬೇಡಾ ಅಂದು ಬಿಟ್ಟೆ ಅವನು ಕುಡುಕ ಅಂತೆ ಊರು ತುಂಬಾ ಹೆಂಗಸರ ಸಹವಾಸ ಅಂತೆ.... ಅಂತೋನ್ನ ಕಟ್ಟಿಕೊಂಡ್ರೆ ಅಷ್ಟೇ ಮತ್ತೆ.

ಗಂಗೆ : ನಿನ್ ಮಾತು ಕೇಳ್ತಿದ್ರೇನೇ ನಿಮ್ಮಪ್ಪ ಅಮ್ಮ ?

ಜಮುನಾ : ಮತ್ತೆ ? ನಾನು ಒಪ್ಪಿದವನಿಗೇ ಕೊಟ್ಟು ಮದುವೆ ಮಾಡಿಕೊಡಬೇಕು ಅಂತ ನಮ್ಮವ್ವ, ನಮ್ಮಪ್ಪನ ಹತ್ರ ಮೊದ್ಲೇ ಹೇಳಿದ್ರು. ನಮ್ಮಪ್ಪ ನನ್ನನ್ನ ಕೇಳೇ ನಿಶ್ಚಯ ಮಾಡಿದ್ದು ಹೆಂಗಸರಿಗೂ ಆಯ್ಕೆ ಸ್ವಾತಂತ್ರ್ಯ ಇರಬೇಕು ಕಣೇ. ಗಂಡು ಒಪ್ಪಿದ ತಕ್ಷಣ ಕಣ್ಣು ಮುಚ್ಚಿ ಹೆಣ್ಣನ್ನ ಗಂಟು ಹಾಕಬಾರದು. ನಮ್ಮ ಅಭಿಪ್ರಾಯಕ್ಕೆ ಬೆಲೆ ಇರಬೇಕು.

ಗಂಗೆ : ನೀನೇ ಪುಣ್ಯ ಮಾಡಿದ್ದೇ ಬಿಡೇ ಜಮುನಾ

ಹಾಡು

ಸ್ವಾತಂತ್ರ್ಯ ಕುರಿತು.

ದೃಶ್ಯ - ಹದಿನಾಲ್ಕು

ಸಿದ್ದಪ್ಪ : ಗಂಗಿ ಲೇ ಗಂಗೀ ಬಾರೇ ಇಲ್ಲಿ ಬರ್ತಾ ಬರ್ತಾ ನಿಂಗೆ ಜಾಸ್ತಿ ಆಯ್ತು.

ಗಂಗೆ : ಏನು ? (ನಿಶ್ಯಕ್ತಿಯಿಂದ ಬರುತ್ತಾಳೆ)

ಸಿದ್ದಪ್ಪ : ನಿಮ್ಮಪ್ಪ ರಾಶಿ ರಾಶಿ ಕೊಟ್ಟಿದ್ದ ನೋಡು ಕೂತ್ಕೊಂಡು ತಿನ್ನಕ್ಕೆ, ಕೊಡ್ತೀನಿ ಅಂದಿದ್ದನ್ನೂ ಕೊಟ್ಟಿಲ್ಲ ಇನ್ನೂ.

ಗಂಗೆ : (ಮಾತಾಡುವುದಿಲ್ಲ)

ಮಾವ : ಸಿದ್ದಪ್ಪ, ಅವಳ್ನ ಮೊದ್ಲು ಓಡ್ಸು, ಮೊನ್ನೆ ನೋಡಿದ್ರೆ ಆ ಅಂಗಡಿ ಮಾದೇವನ ತಾವ ಮಾತಾಡ್ತಾ ನಿಂತಿದ್ಲು.

ಗಂಗೆ : ಅಯ್ಯಯ್ಯೋ ಮಾವ, ಅವನು ನನ್ ತಮ್ಮನ ಥರ. ಬೆಂಕಿಪೊಟ್ನ ತಂದುಕೊಡು ಅಂತ ಹೇಳ್ತಿದ್ದೇ ಅಷ್ಟೆ.

ಸಿದ್ದಪ್ಪ : ಅವನ್ಯಾಕೆ ನಿಂಗೆ ಬೆಂಕಿಪಟ್ನ ತಂದುಕೊಡಬೇಕು. ನಾನೇ ಕೊಡ್ತೀನಿ ನಿಂಗೆ ಬೆಂಕಿಯ......

ಮಾವ : ಏನ್ ಆಟ ಆಡ್ತಾಳೆ ನೋಡೋ

ಗಂಗೆ : ನಾನೇನೂ ಮಾಡ್ಲಿಲ್ಲ ಮಾವಾ ಸುಮ್ನೆ ಏನೇನೋ ಹೇಳಬೇಡಿ.

ಸಿದ್ದಪ್ಪ : ನಮ್ಮಪ್ಪನಿಗೇನೇ ಎದುರು ಮಾತಾಡ್ತಿಯೇನೇ (ಎದ್ದು ಬಂದು ಹೊಡಿಯುತ್ತಾನೆ) ನಡೀ ನಿಮ್ಮಪ್ಪನ ಮನೆಗೆ.

## ದೃಶ್ಯ - ಹದಿನೈದು

(ಜಮುನಾ ಮನೆ)

ಜಮುನಾ ಮಾವಾ : ಏ ಇವಳೇ ಒಂದು ಲೋಟ ನೀರು ತಂದು ಕೊಡೇ

ಅತ್ತೆ : (ತಂದು ಕೊಡುತ್ತಾ) ಒಂದ್ ಲೋಟ ನೀರ್ನೂ ನೀವೇ ಎದ್ದೋಗ್ ಕುಡ್ರೀ ಅದ್ನೂ ನಾನೇ ಕೊಡಬೇಕಾ.

ಮಾವ : ಮತ್ತೆ ನೀನಿರೋದು ಏನಕ್ಕೆ ? ನನ್ ಸೇವೆ ಮಾಡಕ್ಕೇನೇ (ಹೋಗುತ್ತಾನೆ)

ಅತ್ತೆ : ಅಂತೂ ಇವರ ಚಾಕರಿ ಮಾಡ್ಕಂಡು ಸವೆದು ಹೋಗ್ತೀನಿ ಅಷ್ಟೇ.

ಜಮುನಾ : ಈ ಗಂಡಸರೇ ಹಿಂಗೆ ಅತ್ತೆ ಎದುರಿಗೆ ಇರೋ ನೀರು ಎತ್ತಿ ಕುಡಿಯಲ್ಲ ನಾವೇ ಎತ್ತಿಕೊಡಬೇಕು.

ಗರಿಜಾ : ನಿಮ್ಮಗ್ಗೊತ್ತಿಲ್ಲಾ ಅತ್ತಿಗೇ ಅಣ್ಣನೂ ಅಪ್ಪನೂ ಒಂದೇ ಒಂದು ಕೆಲ್ಸ ಮಾಡಲ್ಲ.

ಜಮುನಾ : ಇವರಿಗೆ ಬುದ್ದಿ ಕಲಿಸಬೇಕು ಮತ್ತೆ

ಅತ್ತೆ : ನೋಡೋಣ ಒಂದು ದಿನ ನಾವು ಮಾಡದೆ ಹೋದ್ರೆ ಇವರು ಏನು ಮಾಡ್ತಾರೆ ಅಂತ.

ಗರಿಜಾ : ಸ್ಟ್ರೈಕ್ ಮಾಡೋಣಾ ?

(ಎಲ್ಲರೂ ನಗುತ್ತಾರೆ)

ಮಾವ : ಏ .... ಇವಳೇ, ಒಂದು ಲೋಟ ನೀರು ಕೊಡೇ.

ಜಮುನಾ : ಅತ್ತೆಗೆ ಜ್ವರ ಬಂದಿದೆ ಮಾವಾ ಮನಿಕ್ಕಂಡಿದ್ದಾರೆ.

ಮಾವ : ನೀನೇ ಕೊಡವ್ವ

ಜಮುನಾ : ನಾನು ಗಂಜಿ ಬಸೀತಿದ್ದೀನಿ ಮಾವಾ, ಬಂದೇ

ಮಾವ : ಗಿರಿಜಾ.....ಏ ಗಿರಿಜಾ ಒಂದ್ ಲೋಟ ತತ್ತಾರೇ.

ಗಿರಿಜಾ : ನಾನು ಕೊಟ್ಟಿಗೇಲ್ಲಿದ್ದೀನಿ ಅಪ್ಪಾ (ಧ್ವನಿ) ಕೈಯೆಲ್ಲ ಸಗಣಿ ಆಗ್ತೈತೆ.

ಮಾವ : (ಗೊಣಗುತ್ತಾ) ಈ ಮನೇಲಿ ನೀರು ಕೊಡೋರಿಲ್ಲ. (ಎದ್ದು ಹೋಗಿ ತೆಗೆದುಕೊಳ್ಳುತ್ತಾನೆ)

ಶಂಕರ : ಜಮುನಾ.... ಏ ಜಮುನಾ.... ನನ್ ಪಂಚೆ ಕೊಡೇ

ಅತ್ತೆ : ಅಲ್ಲೇ ಹಗ್ಗದ ಮೇಲಿದೆ ತಗೋಳಪ್ಪ, ಅವಳು ಸ್ನಾನಕ್ಕೆ ಹೋಗವಳೆ.

ಶಂಕರ : ಗಿರಜಾ...

ಅತ್ತೆ : ಅವಳು ಪಕ್ಕದ ಮನೆಗೆ ಹೋಗವ್ಳೆ ನಾನೇ ಕಳುಸ್ದೆ, ಜಲ್ದಿ ಇಸ್ಕೊಂಡು ಬಾ ಅಂತ.

ಶಂಕರ : ನೀನೇ ಕೊಡವ್ವಾ.

ಅತ್ತೆ : ನನ್ ಕಾಲು ಉಳುಕದೆ ತಗೋ ನೀನೇ ತಗೋ.

ಶಂಕರ : ಸರಿ ಬಿಡು (ಹೋಗಿ ತೆಗೆದುಕೊಳ್ಳುತ್ತಾನೆ)

(ಜಮುನಾ ಅತ್ತೆ ಗಿರಿಜಾ ಮುಸಿ ಮುಸಿ ನಗುತ್ತಾರೆ)

ಜಮುನಾ : ಹೀಂಗೇ ನಾಕು ದಿನ ಮಾಡಿದೆ ಅವರವರ ಕೆಲಸ ಅವರವರೇ ಮಾಡಿಕೊಳ್ತಾರೆ.

ಹಾಡು -

ಸಮಾನತೆ

ದೃಶ್ಯ – ಹದಿನಾರು

(ಗಂಗೆ ಬರುತ್ತಾಳೆ)

ಸಿದ್ದಪ್ಪ : ತಂದೇನೇ ?

(ಗಂಗೆ ಸುಮ್ಮನೆ ಹಣ ಕೊಡುತ್ತಾಳೆ)

ಸಿದ್ದಪ್ಪ : ಎಷ್ಟು (ನೋಡಿ) ಇಷ್ಟೇನಾ ? ಹೇಳಿದ್ದೆಷ್ಟು ಕೊಟ್ಟಿದ್ದೆಷ್ಟು ? ನೀನು ಎಂಗೆ ಬಂದೆ ಇಸ್ಟುನ್ನ ಇಸ್ಕೊಂಡು ?

ಮಾವ : (ಬರುತ್ತಾ) ಎಸ್ಟ್ ತಂದಳೋ ?

ಸಿದ್ದಪ್ಪ : ಒಳ್ಳೇ ಬಿಕ್ಷೆ ಕೊಟ್ಟಂಗೆ ಕೊಟ್ ಕಳಿಸವ್ನೆ ಅವರಪ್ಪ ಭಿಕಾರಿ.....

ಮಾವ : ಥೂ ಒಳ್ಳೇ ದರಿದ್ರ ಸಾವಾಸ ಆಯ್ತು ಕಳ್ಸೋ ಬಡೋ ಅವಳ್ನ

ಸಿದ್ದಪ್ಪ : ನಿಂಗೇ ಸರಿಯಾಗ್ ಮಾಡ್ತೀನ್ ಇರು (ಸೀಮೆ ಡಬ್ಬ ಎತ್ತಿಕೊಳ್ಳುತ್ತಾನೆ. ಇನ್ನೇನು ಅವಳ ಮೇಲೆ ಹಾಕುವಷ್ಟರಲ್ಲಿ ಹೊರಗೆ ಗದ್ದಲ.)

(ಮಾವ ಮತ್ತು ಸಿದ್ದಪ್ಪ ದಂಗಾಗುತ್ತಾರೆ)

ಸಿದ್ದಪ್ಪ : (ಚೀತರಿಸಿಕೊಳ್ಳತ್ರ) ಯಾ....ಯಾ.....ಯಾರ್ ನೀವ್ ?

ಜಮುನಾ : ನೀವು ಏನ್ ಮಾಡ್ತಿವ್ರಿ ಅದು ಮೊದ್ಲು ಹೇಳಿ. ನಾವು ಯಾರು ಅಂತ ಆಮೇಲೆ ಕೇಳಿ.

ಮಹಿಳೆ 1 : ವರದಕ್ಷಿಣೆ, ಕಿರುಕುಳ ಕೊಟ್ಟು ನಿಮ್ಮ ಹೆಂಡತಿ ಬದುಕು ನರಕ ಮಾಡಿದೋರು ನಿವೇತಾನೇ ?

ಸಿದ್ದಪ್ಪ : ನಾನಾ ? ನಾನೇನು ಮಾಡಿದೆ ?

ಜಮುನಾ : ಏನೂ ಗೊತ್ತಿಲ್ಲದ ಮಳ್ಳ ಥರ ಆಡ್ತೀರಾ ? ಗಂಗೆನ ಪದೇ ಪದೇ ಹೊಡೆದೂ ಬಡಿದೂ ಅವಳ ತಾಯಿ ಮನೆಗೆ ಕಳಿಸಿ ದುಡ್ಡು ತರಿಸಿಕೊಳ್ತಾ ಇದ್ದೋರು ನೀವೇ ತಾನೇ ?

ಮಹಿಳೇ : ವರದಕ್ಷಿಣೆ ಕೇಳೊದು, ಹಣಕ್ಕಾಗಿ ಕಿರುಕುಳ ಕೊಡೋದು ಕಾನೂನಿನ ಪ್ರಕಾರ ಅಪರಾಧ ಅಂತ ಗೊತ್ತಿಲ್ಲ ನಿಮಗೆ ?

ಮಾವ : ನಾವು ಏನೂ ಕಿರುಕುಳ ಕೊಟ್ಟಿಲ್ಲ.

ಸಿದ್ದಪ್ಪ : ನಾವು ಅವಳ್ನ ಚೆನ್ನಾಗಿ ನೋಡಿಕೋತಿದ್ದೀವಿ. ನೀವ್ಯಾರು ಅದ್ನಕೇಳಕ್ಕೆ ?

ಜಮುನಾ : ಮಹಿಳಾ ಶಕ್ತಿ, ಸ್ತ್ರೀಶಕ್ತಿ ಏನೂಂತ ನಿಮಗೆ ಗೊತ್ತಿಲ್ಲ. ನಾವು ಒಟ್ಟಿಗೆ ಸೇರಿದ್ರೆ ನಿಮ್ಮಂತಹವರು ಮಾಡೋ ಅನ್ಯಾಯನಾ ಒಂದೇ ಸಲಕ್ಕೆ ತಡೀಬಹುದು ಜೊತೆಗೆ ಸರ್ಕಾರ ಕೂಡಾ ನಮ್ಮ ಬೆಂಬಲಕ್ಕಿದೆ.

ಸಿದ್ದಪ್ಪ : ಓಹೋಹೋ ಸರ್ಕಾರ ಕೂಡ ಬೆಂಬಲ ಕೊಡ್ತದಂತೆ. ಏನು ವಿಧಾನಸೌಧ ಇಲ್ಲಿಗೆ ಬಂದು ಬಿಡ್ತದಾ ?

ಜಮುನಾ : ಮಹಿಳೆಯರ ರಕ್ಷಣೆಗೆ ಸರ್ಕಾರ ಬೇಕಾದಷ್ಟು ಕಾನೂನು ಮಾಡಿದೆ. ಸೌಕರ್ಯ ಕಲ್ಪಿಸಿದೆ. ಸಾಂತ್ವನದಲ್ಲಿ ನಿಮ್ಮ ಹೆಂಡತಿಗೆ ನೆರವು ಸಿಗುತ್ತೆ ಗೊತ್ತಾ ? ಅವಳು ನಿಮ್ಮನ್ನ ಬಿಟ್ಟುಹೋಗಬಹುದು ಅವಳಿಗೆ ತರಬೇತಿ ಕೊಟ್ಟು ಸ್ವಂತ ಕಾಲಿನ ಮೇಲೆ ನಿಂತುಕೊಳ್ಳೋ ಹಾಗೇ ಕೂಡಾ ಮಾಡುತ್ತಾರೆ.

ಮಹಿಳೆ 1 : ಅವಳು ನಿಮ್ಮ ಮೇಲೆ ಕೊಡುವ ಒಂದು ದುಡ್ಡಿನಿಂದ ನೀವು ಏಳು ವರ್ಷ ಜೈಲಿನ ಕಂಬಿ ಎಣಿಸಬೇಕಾಗುತ್ತದೆ.

ಸಿದ್ದಪ್ಪ / ಮಾವ : ಆಂ ???

ಮಹಿಳೆ 2 : ಹೌದು ಇಷ್ಟು ವರ್ಷ ಅವಳಿಗೆ ಕಾಟ ಕೊಟ್ರಲ್ಲಾ ಈಗ ನಿಮ್ಮ ಸರದಿ.

ಜಮುನಾ : (ಶಂಕರನಿಗೆ) ಕರೀರಿ ಪೊಲೀಸ್

(ಪೊಲೀಸ್ ಬರುತ್ತಾನೆ)

ಪೊಲೀಸ್ : ಯಾರಪ್ಪಾ, ವರದಕ್ಷಿಣೆ ಕಾಟ ಕೊಡ್ತಿರೋದು ? ನಡೀರಿ ಸ್ಟೇಷನ್‌ಗೆ.

(ಸಿದ್ದಪ್ಪ ಹೆದರುತ್ತಾನೆ)

ಸಿದ್ದಪ್ಪ : (ಪೊಲೀಸರ ಕಾಲು ಹಿಡಿದು) ತಪ್ಪಾಯ್ತು ತಪ್ಪಾಯ್ತು, ಬಿಟ್ ಬಿಡಿ ಇನ್ನೊಂದು ಸಲ ಹಿಂಗ್ ಮಾಡಲ್ಲ.

ಮಾವ : ಬುಟ್ ಬುಡಿ ಸ್ವಾಮಿ, ಇನ್ ಮೇಲೆ ಹಂಗೆಲ್ಲ ಮಾಡಬೇಡಿ.

ಪೊಲೀಸ್ : ಹೆಣ್ಣುಮಗು ಮೇಲೆ ಇಂತಾ ದುರಾಚಾರ ಮಾಡಕ್ಕೆ ನಿಮಗೆ ಎಂಗಾದ್ರೂ ಮನಸ್ಸು ಬಂತೋ ? ಪ್ರಮಾಣ ಮಾಡಿ ಮೊದ್ಲು. (ಪ್ರೇಕ್ಷಕರನ್ನು ಉದ್ದೇಶಿಸಿ ಪ್ರಮಾಣ ಮಾಡಿಸುತ್ತಾನೆ)

**"ನಾವು ನಮ್ಮ ಮಕ್ಕಳನ್ನು ಗಂಡು ಹೆಣ್ಣು ಭೇದವಿಲ್ಲದೇ ಸಮನಾಗಿ ಬೆಳೆಸುತ್ತೇವೆ. ಹೆಣ್ಣು ಮಗುವಿಗೂ ಗಂಡು ಮಗುವಿನಂತೆಯೇ ಶಿಕ್ಷಣ ಕೊಡಿಸುತ್ತೇವೆ. ಗಂಡು ಹೆಣ್ಣು ಇಬ್ಬರು ಮಕ್ಕಳಿಗೂ ಸಮಾನ ಊಟ, ವಸತಿ, ವೈದ್ಯಕೀಯ ಚಿಕಿತ್ಸೆಗಳನ್ನು ನೀಡುತ್ತೇವೆ. ಮಗಳಿಗೆ 18 ವರ್ಷ ವಯಸ್ಸಿಗೆ ಮೊದಲು ಮದುವೆ ಮಾಡುವುದಿಲ್ಲ. ಮದುವೆಯಲ್ಲಿ ವರದಕ್ಷಿಣೆ ತೆಗೆದುಕೊಳ್ಳುವುದಿಲ್ಲ. ಕೊಡುವುದೂ ಇಲ್ಲ ಮನೆಯಲ್ಲಿ ಅವಳ ಮೇಲೆ ಕ್ರೌರ್ಯ ತೋರಿಸುವುದಿಲ್ಲ. ಸಮಾನವಾಗಿ ಕಂಡು ಪ್ರೀತಿ ಆದರಿಂದ ನೋಡಿಕೊಳ್ಳುತ್ತೇವೆ."**

**ಹಾಡು -**

☺☺☺ (ಮುಕ್ತಾಯ) ☺☺☺

ಆಡುವ ಕೂಸಿಗೆ ಮದುವೆ ಏಕವ್ವ ?

18ಕ್ಕೆ ಮುಂಚೆ ಮದುವೆ ಅಪರಾಧ

ಲಿಂಗ ತಾರತಮ್ಯ




(ಚಿತ್ರ - 12)




**CONTACT IN :**

1. Free legal Aid Board
2. ಸಾಂತ್ವನ - ಮಹಿಳಾ ಸಹಾಯವಾಣಿ
3. ಕರ್ನಾಟಕ ರಾಜ್ಯ ಮಹಿಳಾ ಆಯೋಗ್ಯ

(ಚಿತ್ರ - 12ಎ)

# ಲಕ್ಷ್ಮಿ ಕಟಾಕ್ಷ

: ಪಾತ್ರವರ್ಗ :

1. ರಾಮಪ್ಪ
2. ಲಕ್ಷ್ಮಿ
3. ಕೃಷ್ಣ
4. ಗಿರಜವ್ವ
5. ರಂಗಣ್ಣ
6. ಲಕ್ಷ್ಮಿತಾಯಿ
7. ಮಧ್ಯವರ್ತಿ
8. ಮಾದೇವಿ
9. ಶಾಂತವ್ವ

ನಾಟಕ - 2

# ಲಕ್ಷ್ಮಿ ಕಟಾಕ್ಷ

(ವರದಕ್ಷಿಣೆ ವಿರೋಧಿ ನಾಟಕ)

## ದೃಶ್ಯ - ಒಂದು

(ಲಕ್ಷ್ಮಿಯ ಮನೆಗೆ ಹೆಣ್ಣು ನೋಡಲು ಗಂಡಿನ ಮನೆಯವರು ಬಂದಿದ್ದಾರೆ)

ಮಧ್ಯವರ್ತಿ : ನೋಡಪ್ಪಾ ಕೃಷ್ಣ, ಸರಿಯಾಗಿ ನೋಡಿ ಹೇಳಿಬಿಡು, ಆಮೇಲೆ ಸರಿಯಾಗಿ ನೋಡಿಲ್ಲ ಅದೂ ಇದೂ ಅಂತ ರಾಗ ತೆಗೀಬೇಡಾ ಏನಮ್ಮಾ ಲಕ್ಷ್ಮಿ ನೀನೂ ನೋಡ್ದ್ಯಾ.

ಲಕ್ಷ್ಮಿಯ ತಂದೆ : ಅವಳ್ನೇನು ಕೇಳೀರಿ ತಗೀರಿ ನಾವು ನಮ್ ಹುಡುಗೀನ ಹಂಗೆ ಬೆಳಿಸಿಲ್ಲ. ದೊಡ್ಡೋರು

ರಾಮಪ್ಪ ಹೇಳಿದ ಮಾತು ಮೀರಕ್ಕಿಲ್ಲ ಅವಳು.

ಮಧ್ಯವರ್ತಿ : ಹಂಗಲ್ಲಪ್ಪಾ, ಈಗೆಲ್ಲ ಹುಡುಗೀರ ಮಾತನ್ನೂ ಕೇಳಬೇಕು, ಅಂತಾ ಕಾಲಾ ಬಂದೈತೆ.

ರಾಮಪ್ಪ : ಅದೆಲ್ಲಾ ಬೇರೆ ಕಡೆ. ನಮ್ ಮನೇಲಿ ಹಂಗೆಲ್ಲಾ ಇಲ್ಲಾ. ನಾವು ಹಾಕಿದ ಗೆರೆ ದಾಟಲ್ಲ ನನ್ ಮಗ್ಳು ಲಕ್ಷ್ಮಿ ನೀವು ಹೇಳಿದ ಹಂಗೆ ಕೇಳಿಕೊಂಡು ಇರ್ತಾಳೆ.

ಮಧ್ಯವರ್ತಿ : ಏನ್ರಪ್ಪಾ, ನೀವೇನು ಹೇಳ್ತೀರಿ, ಇಲ್ಲೇ ಹೇಳಿಬಿಡಿ, ಇನ್ನು ಮುಚ್ಚುಮರೆ ತಡ ಯಾಕೆ ? ಹುಡುಗಿ ಒಪ್ಪಿಗೇನಾ ಹೇಳಪ್ಪಾ ಕೃಷ್ಣ ?

(ಕೃಷ್ಣ ಹುಡುಗನ ತಂಡೆ ಕಡೆ ನೋಡುತ್ತಾನೆ. ತಂಡೆ ಏನು ಎನ್ನುವಂತೆ ಸನ್ನೆ ಮಾಡುತ್ತಾನೆ. ಕೃಷ್ಣ ಒಪ್ಪಿಗೆ ಎನ್ನುವಂತೆ ಸನ್ನೆಮಾಡುತ್ತಾನೆ.)

ಮಧ್ಯವರ್ತಿ : ಇನ್ನೇನು ಹುಡುಗ ಒಪ್ಪಿಕೊಂಡ ಮೇಲೆ ಮದುವೆ ಆದ ಹಾಗೇ ಲೆಕ್ಕ...

ರಾಮಪ್ಪ/ : ನಮ್ ಲಕ್ಷ್ಮಿ ಪುಣ್ಯ ಮಾಡಿದ್ಲು.

ಗಿರಿಜವ್ವ

(ಹುಡುಗನ ತಂದೆ ಮಧ್ಯವರ್ತಿಯನ್ನು ಪಕ್ಕಕ್ಕೆ ಕರೆಯುತ್ತಾನೆ. ಅವನು ಏನು ಎಂದು ಹತ್ತಿರ ಹೋಗುತ್ತಾನೆ. ಹುಡುಗನ ತಂದೆ ಅವನ ಕಿವಿಯಲ್ಲಿ ಪಿಸುಗುಡುತ್ತಾನೆ. ಮಧ್ಯವರ್ತಿ ವಾಪಸ್ಸು ಬಂದು ತನ್ನ ಜಾಗದಲ್ಲಿ ಕೂರುತ್ತಾನೆ.)

ರಾಮಪ್ಪ : ಯಾವಾಗ ಇಟ್ಟುಕ್ಕೊಣಾ ಲಗ್ನಪತ್ರಿಕೆ.

ಮಧ್ಯವರ್ತಿ : ತಡೀರಿ ತಡೀರಿ ರಾಮಪ್ಪ, ಎಲ್ಲಾ ಮಾಡೋಣ, ಅದಕ್ಕೆ ಮೊದಲು ಮಾತುಕತೆ ಆಗಬೇಕಲ್ಲಾ.....

ರಾಮಪ್ಪ : ಆಗ್ಲಿಬಿಡಣ್ಣಾ, ಅವರು ಏನು ಕೇಳ್ತಾರೋ ಕೇಳ್ಲಿ, ನಾನ್ ನನ್ ಕೈಲಾದದ್ದುಕೊಡ್ತೀನಿ.

ಮಧ್ಯವರ್ತಿ : ಮಗಳಿಗೆ ಏನು ಕೊಡ್ತೀರಾ ?

ರಾಮಪ್ಪ : ಅವಳಿಗೆ ಒಂದು ಜೊತೆ ಬಳೆ, ತಾಳಿಸರ, ಐದು ಸೀರೆ ......

ಮಧ್ಯವರ್ತಿ : (ಗಂಡಿನ ತಂದೆ ಕಡೆ ಒಮ್ಮೆ ನೋಡಿ) ಅದು ಬಿಡ್ರೀ, ಅದು ನಿಮ್ಮ ಮಗಳಿಗೆ ನೀವು ಕೊಡುತ್ತಿರೋದು, ಹುಡುಗನಿಗೆ ಏನು ಕೊಡ್ತೀರಾ ?

ರಾಮಪ್ಪ : ಹುಡುಗನಿಗೆ ಬಟ್ಟೆ ಉಂಗುರ, ವಾಚು ......

ಮಧ್ಯವರ್ತಿ : ಅಲ್ಲಾರಾಮಪ್ಪ, ಬಟ್ಟೆ ಬರೆ ವಾಚು ಉಂಗುರಕ್ಕೆ ನಿಮ್ಮ ಮನೆ ಬಾಗಿಲ ತನಕ ಬರಬೇಕಿತ್ತಾ ಕೃಷ್ಣಾ ? ಹುಡುಗ ಓದವ್ನೆ, ಕೆಲಸದಾಗವ್ನೆ, ಅವನುದ್ದಕ್ಕೂ ಕೊಟ್ಟು ಮಾಡಿಕೊಳ್ಳಕ್ಕೆ ಜನ ಸಾಲಾಗಿ ಕಾದು ನಿಂತವರೆ, ಅಂತದ್ರಲ್ಲಿ ......

ರಾಮಪ್ಪ : ಅದೇನೇನು ಕೊಡಬೇಕು ನೀವು ಹೇಳಿಬುಡ್ರಪ್ಪ

ಮಧ್ಯವರ್ತಿ : ಅದ್ನೂ ನಾನೇ ಹೇಳಬೇಕಾ ?

(ಹುಡುಗನ ತಂದೆ ಹತ್ತಿರ ಹೋಗಿ ಬಗ್ಗಿ ಪಿಸುಗುಡುತ್ತಾನೆ. ಹುಡುಗನ ತಂದೆ ಅವನ ಕಿವಿಯಲ್ಲಿ ಹೇಳುತ್ತಾನೆ.)

ಮಧ್ಯವರ್ತಿ : ಸರಿಯಪ್ಪ, ಇಪ್ಪತ್ತೈದು ಸಾವಿರ ನಗದು, ಚಿನ್ನ ಮೂರು ತೊಲ, ಮಂಚ, ಮನೆಪಾತ್ರೆ ಜೊತೆಗೆ ಒಂದು ಮೋಟಾರ್ ಸೈಕಲ್ಲು.

ರಾಮಪ್ಪ : ಆಂ ? ಅಷ್ಟೆಲ್ಲ ನಾನು ಎಲ್ಲಿಂದ ತರ್ಲಿ ರಂಗಣ್ಣ ?

ರಂಗಣ್ಣ : ಅದ್ನ ನಂಗೆ ಕೇಳಿದ್ರೆ ? ಅವಳೇನು ನನ್ನ ಮಗಳಾ ? ನನ್ ಮಗ್ಳಿಗೆ ಮದುವೆ ಮಾಡಿದಾಗ ಇದಕ್ಕೂ ಜೋರಾಗೇ ಕೊಟ್ಟು ಮಾಡಿದ್ದೀನಿ. ಇರೋನು ಒಬ್ಬ ಮಗ. ಅವನನ್ನೂ ಬಿಕಾರಿ ಥರ ಮದುವೆ ಮಾಡ್ಕೋ ಅನ್ನಲಾ ?

ಲಕ್ಷ್ಮಿ ತಾಯಿ : ಏನ್ರೀ, ಸ್ವಲ್ಪ ಬನ್ನಿ.

ರಾಮಪ್ಪ : (ಪಕ್ಕಕ್ಕೆ ಸರಿದು) ಏನೇ ? (ಮೆಲುದನಿಯಲ್ಲಿ)

ಲಕ್ಷ್ಮಿ ತಾಯಿ : ನೀವು ಈಗ್ಲೇ ಅದೆಲ್ಲ ಕ್ಯಾತೆ ತೆಗೀಬೇಡಿ. ಮೊದ್ಲು ಊಂ ಅನ್ನಿ, ಆಮೇಲೆ ನೋಡಾನಾ.

ರಾಮಪ್ಪ : ಅಲ್ಲ ಕಣೆ, ಈಗ ಊಂ ಅಂದುಬುಟ್ರೆ ಆಮೇಲೆ ಕೊಡಕ್ಕಾಗ್ದೇ ಇದ್ರೆ ?

ಲಕ್ಷ್ಮಿ ತಾಯಿ : ಹಂಗಂತ ಮಗುಳ್ನ ಮನೇಲೇ ಇಟ್ಕೋತೀರಾ ? ಸ್ವಲ್ಪ ಈಗ ಸ್ವಲ್ಪ ಆಮೇಲೆ ಕೊಡ್ತೀವಿ ಅನ್ನಿ.

ರಾಮಪ್ಪ : ಅವರು ಅದಕ್ಕೆ ಒಪ್‌ತಾರೋ ಇಲ್ಲೋ ?

ಲಕ್ಷ್ಮಿ ತಾಯಿ : ಆಯ್ಯೋ ಕೇಳಿ ನೋಡ್ರೀ, ಎಲ್ಲಾ ನೀವೇ ಹೇಳಬೇಡಿ.

ರಾಮಪ್ಪ : (ಸರಿದು) ಆಯ್ತು ರಂಗಣ್ಣ, ನೀವೇ ಹೇಳಿದ ಹಾಗೇ ಆಗ್ಲಿ, ಆದ್ರೆ.....

ರಂಗಣ್ಣ : ಏನಪ್ಪಾ ರಾಗ ಎಳಿತಾ ಇದ್ದೀಯಾ ?

ರಾಮಪ್ಪ : ಸ್ವಲ್ಪ ಈಗ ಸ್ವಲ್ಪ ಆಮೇಲೆ....

ಮಧ್ಯವರ್ತಿ : ಇದೊಳ್ಳೆ ಚೌಕಾಸಿ ಆಯ್ತಲ್ಲಾ ರಾಮಪ್ಪ.

ರಾಮಪ್ಪ : ಮದುವೆಯಾಗಿ ಒಂದು ವರ್ಷದೊಳಗೆ ಕೊಟ್ಟುಬಿಡ್ತೀನಿ. ಮುಂದಿನ ದೀಪಾವಳಿ ಹೊತ್ತಿಗೆ ಕೊಟ್ ಬುಡ್ತೀನಿ.

ರಂಗಣ್ಣ : ನೋಡಪ್ಪಾ, ಕೊಟ್ ಮಾತು ಉಳಿಸ್ಕಾಬೇಕು. ಇಲ್ದಿದ್ರೆ ನಿನ್ ಮಗಳ್ನ ನಿನ್ ಮನೇ ಬಾಗಿಲಿಗೇ ತಂದುಬಿಟ್ಟು, ನನ್ ಮಗನಿಗೆ ಬೇರೆ ಮದುವೆ ಮಾಡ್ತಿನಿ ನೋಡು.

ರಾಮಪ್ಪ : ಛೇ ಛೇ, ಎಲ್ಲಾದ್ರೂ ಉಂಟೇ, ಖಂಡಿತಾ ಕೊಡ್ತೀನಿ.

ಮಧ್ಯವರ್ತಿ : ಏನ್ ರಂಗಣ್ಣ, ಲಗ್ನ ಪತ್ರಿಕೆ ನಿಶ್ಚಯ ಮಾಡೋದಾ ?

ರಂಗಣ್ಣ : ನೋಡಪ್ಪಾ, ಒಳ್ಳೇ ದಿನ ನೋಡಿ ಅದ್ನೂ ಮಾಡಿಬಿಡಾನ.

(ರಂಗಣ್ಣ, ಅವನ ಹೆಂಡತಿ ಏಳುತ್ತಾರೆ. ಕೃಷ್ಣನೂ ಏಳುತ್ತಾನೆ. ರಾಮಪ್ಪ, ಲಕ್ಷ್ಮಿ ತಾಯಿ ಸಂತೋಷವಾಗಿದ್ದಾರೆ.) (ರಂಗಣ್ಣ, ಕೃಷ್ಣ ತಾಯಿ ಹೋಗುತಾರೆ.)

ರಾಮಪ್ಪ : ಅಲ್ಲ ಕಣೇ, ಮೊದ್ಲು ಒಪ್ಕಳಿ ನೋಡಾನಾ ಅಂದ್ಯಲ್ಲ, ಎಲ್ಲಿಂದ ತರ್ಲಿ ಕಾಸೂ.

ಲಕ್ಷ್ಮಿ ತಾಯಿ : ಆಯ್ಯೋ ನಿಮಗೆ ಏನು ಹೇಳ್ಲಿ ನಾನು ? ಹೆಣ್ಣು ಮಗ ಅಂದ ಮೇಲೆ ನಾವು ಮಾಡಲೇಬೇಕು ತಾನೇ ? ಇಲ್ಲಾ ಅಂದ್ರೆ ಆದೀತಾ ? ಎಲ್ಲಾದ್ರೂ ಸಾಲ ತನ್ನಿ ಮತ್ತೆ.

ರಾಮಪ್ಪ : ನನ್ನೇ ಹರಾಜು ಹಾಕ್ಕೊಂಡ್ರೂ ಸಾಲ ಹುಟ್ಟಲ್ಲ ..... ಇನ್ನು ದೇವರೇ ಗತಿ .....

## ದೃಶ್ಯ – ಎರಡು

(ಲಕ್ಷ್ಮಿ ವಿರೋಧಿಸುತ್ತಾಳೆ)

ಲಕ್ಷ್ಮಿ : ಅಲ್ಲ ಕಣವ್ವಾ, ನನ್ ಮದುವೆಗೆ ಇಷ್ಟು ಸಾಲ ತಗೋಂಡ್ರೆ, ನಾಳೆ ಎಂಗೆ ತೀರಿಸ್ತೀರಾ ?

ತಾಯಿ : ನಮ್ದು ಎಂಗೋ ಕಳೀತದೆ ಬುಡವ್ವ ? ನೀನು ಚಂದಾಗಿದ್ರೆ ಸಾಕು.

ಲಕ್ಷ್ಮಿ : ಚೆಂದಾಗಿರಬೇಕಾದ್ರೆ ದುಡ್ಡೇ ಬೇಕಾ ? ಮನಸ್ಸುಗಿಂತ ದುಡ್ಡಿಗೇ ಬೆಲೆ ಕೊಡೋ ಮನೆಗೆ ಯಾಕವ್ವಾ ನನ್ನ ಕೊಡ್ತೀರಿ ?

ತಾಯಿ : ಅಯ್ಯೋ ಬುಡ್ತು ಅನ್ನು ಮಗಳೇ, ಹೆಣ್ಣು ಮಗೀನ ಮದುವೆ ಮಾಡಬೇಕಾದ್ರೆ ಎರಡು ಜೊತೆ ಜೋಡ್ ಸವೀಬೇಕು ಅಂತಾರೆ. ಅಂತಾದ್ರಲ್ಲಿ ಈಗ ಮನೆ ಬಾಗಿಲಿಗೆ ಬಂದಿರೋ ಗಂಡ್ನ ಬುಟ್ ಬುಡಕ್ಕಾಯ್ತದಾ ? ಯಾರು ಬಂದ್ರೂ ಕೊಡ್ಲೇ ಬೇಕಲ್ಲಾ ? ದುಡ್ಡಿಲ್ದೇ ಯಾರ್ ಮಗಳೇ ಮಾಡಿಕೊಳ್ಳೋರು ?

ಲಕ್ಷ್ಮಿ : ಏನವ್ವಾ, ಇದೇನು ವ್ಯಾಪಾರಾನಾ ?

ತಾಯಿ : ಕೋಳೀನ್ ಕೇಳಿ ಖಾರಾ ಅರೀತಾರಾ ? ನಿನ್ ಮಾತು ಕೇಳ್ತೋರು ಯಾರು ಈಗ ? ನೀನು ಸುಮ್ಮ್ನೆ ಇರು, ಎಂಗೋ ಆಯ್ತದೆ.

ಲಕ್ಷ್ಮಿ : ಇದೆಲ್ಲ ಇನ್ನೂ ಎಷ್ಟ್ ಕಾಲ ಅವ್ವಾ ? ಇದ್ನೆಲ್ಲ ಬುಟ್ಟು ಬುಡಬೇಕು.

ತಾಯಿ : (ನಗುತ್ತಾ) ಅಯ್ಯೋ ಮಗಳೇ, ಹಿಂದಿನ ಕಾಲದಿಂದ ಬಂದ ಸಂಪ್ರದಾಯ ನೋಡೂ, ಅಷ್ಟು ಬೇಗನೇ ಬುಟ್ಟು ಹೋಗಾಕಿಲ್ಲ. ಅಂತಾ ಕಾಲಾನೂ ಬತ್ತದಾ ?

ಲಕ್ಷ್ಮಿ : ಬತ್ತದೆ ನೋಡ್ತಿರು.

## ದೃಶ್ಯ – ಮೂರು

(ಸ್ವಸಹಾಯ ಸಂಘದ ಮಹಿಳೆಯೊಬ್ಬಳು ಲಕ್ಷ್ಮಿ ಮನೆಗೆ ಬರುತ್ತಾಳೆ.)

ಮಾದೇವಿ : ಗಿರಿಜವ್ವಾ, ಏ ಗಿರಿಜವ್ವಾ, ಏನ್ ಮಾಡ್ತಾ ಇದ್ದೀಯಾ ?

ಗಿರಿಜವ್ವಾ : ಓ ಮಾದೇವಿ, ಬಾ ಬಾ ...

ಮಾದೇವಿ : ಅಲ್ಲಾ, ಯಾವತ್ತೂ ಸಂಘದ ಸಭೆಗೆ ತಪ್ಪಿಸಿಕೊಂಡೋಳಲ್ಲ ನೀನು, ಇವತ್ತು ಯಾಕೆ ಬರಲಿಲ್ಲ ಸಭೆಗೆ ? ನೋಡ್ಕಂಡು ಬರಾನಾ ಅಂತ ಬಂದೆ.

ಗಿರಿಜ : ಏನೋ ಕೆಲ್ಸ ಇತ್ತು ಅದ್ಕೆ ಬರ್ನಿಲ್ಲ.

ಮಾದೇವಿ : ಏನಪ್ಪ ಅಂತಾ ಕೆಲ್ಸ ?

ಗಿರಿಜ : ಅಯ್ಯೋ ಬುಡವ್ವ, ನಮ್ ದುಃಖ ನಮಗೆ.

ಮಾದೇವಿ : ಊಂ, ಅದೂ ಸರೀನೇಯಾ ನಿಮ್ ದುಃಖ ನಿಮಗೇಯಾ, ನಮಗ್ಯಾಕೆ ಏಳ್ತೀಯಾ ? ಏಳಿದ್ರೆ ನಮ್ ದುಃಖ ಆಗಿ ಹೋಯ್ತದಾ ?

ಗಿರಿಜ : ಅಯ್ಯೋ, ತೆಪ್ ತಿಳೀಬೇಡಾ ಮಾದೇವಿ, ನಮ್ ಲಕ್ಷ್ಮಿಗೆ ಮದುವೆ ಗೊತ್ತಾಯ್ತು.

ಮಾದೇವಿ : ಅಂ ! ಲಕ್ಷ್ಮಿಗೆ ಮದುವೆ ಗೊತ್ತಾಯ್ತಾ ? ಅದಕ್ಕೆ ನಗ್ ನಗ್ತಾ ಇರೋದು ಬುಟ್ಟು ಇಂಗೆ ದುಃಖ ಪಕ್ಕ ಅಂತಿದ್ದಿಯಲ್ಲಾ ಗಿರಿಜಾ ?

ಗಿರಿಜ : ಸಂತೋಷಪಡಕ್ಕೆ ಏನಿಲ್ಲ, ಗಂಡಿನ ಕಡಿಯೋರು ಬಾಲಾ ಡಿಮ್ಯಾಂಡು ಮಾಡೋರೆ...

ಮಾದೇವಿ : ಅಂ ! ಡಿಮ್ಯಾಂಡು ? ಏನ್‌ಬೇಕಂತೆ ಅವರಿಗೆ ?

ಗಿರಿಜ : ಇಪ್ಪತ್ತೈದು ಸಾವಿರ, ಮೋಟಾರ್ ಸೈಕಲ್ಲು ......

ಮಾದೇವಿ : ಅಂ ! ಎಲ್ಲಿಂದ ತರುತ್ತಾರಂತೆ ?

ಗಿರಿಜ : ಅದ್ನೆಲ್ಲ ಯಾರ್ ಕೇಳ್ತಾರವ್ವಾ ? ಈಗ ಕೊಡಬೇಕು ಅಂದ್ರೆ ಕೊಡಬೇಕು. ನಮಗೂ ಮರ್ವಾದೆ ಇಲ್ವಾ ? ಊರಲ್ಲಿ ತಲೆ ಎತ್ತಿಕೊಂಡು ನಡೀಬೇಕು ತಾನೇ ? ಹೆಣ್ಣು ಹೆತ್ತಮೇಲೆ....

ಮಾದೇವಿ : ಹೆಣ್ಣು ಹೆತ್ತರೆ ಮರ್ಯಾದೆ ಇಲ್ವಾ ? ಹೆಣ್ಣು ಮಕ್ಕಳೇ ಇಲ್ದೇ ಹೋದ್ರೆ ಎಲ್ಲಿಂದ ತತ್ತಾರೆ ಹೆಣ್ಣನ್ನ ? ನೀವು ಒಪ್ಕೊಂಡು ಬುಟ್ರಾ ?

ಗಿರಿಜ : ಒಪ್ಕೊಳ್ದೇ ಏನ್ ಮಾಡೋದು ? ಅದ್ಕೆ ಹೊಂದಿಸ್ತಾ ಇದ್ದೀವಿ. ಗುಂಪಿನ ಸಭೆಗೆ ಇನ್ನೇನ್ ಬರ್ಲಿ ನಾನು ?

ಮಾದೇವಿ : ಇದಕ್ಕೆ ಏನಾದ್ರೂ ಪರಿಹಾರ ಕಂಡು ಹಿಡೀಲೇಬೇಕು ಗಿರಿಜಾ

ಗಿರಿಜ : ಏನ್ ಪರಿಹಾರ ಕಂಡು ಹಿಡಿತಿಯೋ ಏನೋ ! ನೋಡೋನಾ ....

## ದೃಶ್ಯ - ನಾಲ್ಕು

(ಸಂಘದ ಸಭೆ. ಎಲ್ಲ ಸದಸ್ಯೆಯರೂ ಇದ್ದಾರೆ)

ಮಾದೇವಿ : ನೋಡ್ರವ್ವಾ, ಗಿರಿಜವ್ವನ ಮಗಳು ಲಕ್ಷ್ಮಿ ಮದುವೆ ಗೊತ್ತಾಗೈತೆ. ಆದರೆ ಗಂಡಿನ ಕಡಿಯೋರು ವಿಪರೀತ ವರದಕ್ಷಿಣೆ ಕೇಳ್ತಾ ಅವ್ರೆ, ನಾವು ಈಗ ಏನ್ ಮಾಡೋಣಾ ?

ಸದಸ್ಯೆ 1 : ವರದಕ್ಷಿಣೆ, ತಗೋಳೋದು, ಕೊಡೋದು ಎರಡೂ ಕಾನೂನಿನ ಪ್ರಕಾರ ಅಪರಾಧ ಇದನ್ನ ನಾವು ನಿಲ್ಲಸ್ಲೇಬೇಕು.

ಮಾದೇವಿ : ಹಾಗಾದ್ರೆ ಏನ್ ಮಾಡಬಹುದು ?

ಸದಸ್ಯೆ 2 : ನಾವು ಗುಂಪಿನ ಸದಸ್ಯೆಯರೆಲ್ಲ ಸೇರಿ ಗಂಡಿನ ಮನೆಗೆ ಹೋಗಿ ತಿಳಿಸಿಕೊಡೋಣಾ.

ಮಾದೇವಿ : ಏನವ್ವಾ ಏನಂತೀರಿ ಈ ಮಾತ್ಗೆ ?

ಎಲ್ಲರೂ : ನಡೀರಿ ಹೋಗೋಣ, ಇವತ್ತು ಗಿರಿಜನ ಮಗಳಿಗೆ ಈ ಪಾಡಾದ್ರೆ ನಾಳೆ ನಮ್ಮ ಮನೆ ಹೆಣ್ಣು ಮಕ್ಕಳಿಗೂ ಇದೇ ಪಾಡಾಯ್ತದೆ. ಇದನ್ನು ಈಗ್ಲೆ ನಿಲ್ಲಿಸೋಣ ನಡೀರಿ.

ದೃಶ್ಯ - ಐದು

(ಇನ್ನೊಂದು ಸಂಘದ ಸಭೆ. ಅದರಲ್ಲಿ ಹುಡುಗನ ತಾಯಿಯೂ ಸದಸ್ಯೆ)

ಸದಸ್ಯೆ 1 : ನೋಡ್ರವ್ವಾ, ಲಾಯರು ಬಂದು ಈ ಕಾಗ್ದ ಕೊಟ್ಟು ಹೋಗಿದ್ದಾರೆ. ವರದಕ್ಷಿಣೆ ವಿರೋಧಿ ಕಾಯ್ದೆ ಅಂತ. ಮದುವೆಯಲ್ಲಿ ವರದಕ್ಷಿಣೆ ಕೇಳೋದು, ತಗೋಳೋದು ಕೊಡೋದು ಮೂರು ತಪ್ಪು. ವರದಕ್ಷಿಣೆ ತಗೊಂಡರೆ ಅಥವಾ ಕೊಟ್ಟರೆ ಶಿಕ್ಷೆ ಆಗುತ್ತೆ. ಏಳು ವರ್ಷದವರೆಗು ಜೈಲು ಶಿಕ್ಷೆ ಕೂಡ ಆಗಬಹುದು.

ಹುಡುಗನ ತಾಯಿ: ಆಂ ! ಏಳು ವರ್ಷನ ಜೈಲು ?

ಸದಸ್ಯೆ 1 : ಹೂ ಕಣವ್ವಾ, ಈಗೆಲ್ಲಾ ಬಹಳ ಕಟ್ಟುನಿಟ್ಟಾಗಿದ್ದಾರೆ. ಏಳು ವರ್ಷ ಜೈಲು ಅಷ್ಟೇ ಅಲ್ಲ, ಹತ್ತು ಸಾವಿರ ರೂಪಾಯಿಯವರೆಗು ದಂಡ ಕೂಡ ಹಾಕ್ತಾರೆ.

ಹುಡುಗನ ತಾಯಿ: ಆಂ ! ದಂಡ ಹಾಕ್ತಾರಾ ?

ಸದಸ್ಯೆ 1 : ಹೂಂ ಮತ್ತೆ, ಸುಮ್ಮೆ ಬಿಟ್ಟುಬಿಡ್ತಾರಾ ?

ಸದಸ್ಯೆ 2 : ಅದಕ್ಕೆ ಈಗ ಸ್ವಸಹಾಯ ಗುಂಪುಗಳಲ್ಲಿ ವರದಕ್ಷಿಣೆ ವಿರೋಧ ಪ್ರಮಾಣ ವಚನ ಅಧಿಕಾರ ಮಾಡ್ತಾ ಇದ್ದಾರೆ. ಅಂದರೆ ಗುಂಪಿನ ಸದಸ್ಯೆಯರು ತಮ್ಮ ತಮ್ಮ ಮನೆಗಳಲ್ಲಿ ವರದಕ್ಷಿಣೆ ಕೊಡೋದಿಲ್ಲ ಮತ್ತು ತಗೋಳ್ಳಾದಿಲ್ಲ ಅಂತ ಪ್ರಮಾಣ ಮಾಡ್ತಿದ್ದಾರೆ. ನಾವು ನಮ್ಮ ಸಂಘದಿಂದ ಪ್ರಮಾಣ ಮಾಡಬೇಕು.

(ಸಾಮೂಹಿಕ ಪ್ರಮಾಣ ವಚನ)

"ನಾವು ನಮ್ಮ ನಮ್ಮ ಮಕ್ಕಳ ಮದುವೆಯಲ್ಲಿ ವರದಕ್ಷಿಣೆ ಕೊಡುವುದೂ ಇಲ್ಲ, ತೆಗೆದುಕೊಳ್ಳುವುದೂ ಇಲ್ಲ ಅಂತ ದೇವರ ಸಾಕ್ಷಿಯಾಗಿ ಪ್ರಮಾಣ ಮಾಡುತ್ತೇವೆ."

ದೃಶ್ಯ - ಆರು

(ಹುಡುಗನ ತಾಯಿ-ತಂದೆ ಕೂತಿದ್ದಾರೆ. ತಾಯಿ ಬರುತ್ತಾಳೆ)

[illegible] : [illegible] ಮದುವೆಗೇ ಇಷ್ಟು ಚೌಕಾಸಿ ಮಾಡ್ತಾನಲ್ಲಾ.

ಹೆಂಡತಿ : (ಹೆದರುತ್ತ) ರೀ...

ರಂಗಣ್ಣ : ಏನು ?

ಹೆಂಡತಿ : ಇವತ್ತು ನಮ್ ಗುಂಪಲ್ಲಿ ಪ್ರಮಾಣ ಮಾಡಿಸ್ಕಂಡ್ರು.

ರಂಗಣ್ಣ : ಪ್ರಮಾಣವಾ ? ಏನಂತ ?

ಹೆಂಡತಿ : ಅದೂ.... ಅದೂ...

ರಂಗಣ್ಣ : ಏನದು ಹೇಳೇ, ಅದೇನ್ ಅದೂ ಅದೂ ಅಂತ ತಡವರಿಸ್ತೀಯಾ ?

ಹೆಂಡತಿ : ವರದಕ್ಷಿಣೆ ತಗೋಳಲ್ಲ ಕೊಡಲ್ಲ ಅಂತ ಪ್ರಮಾಣ ಮಾಡಿಸ್ಕಂಡ್ರು.

ರಂಗಣ್ಣ : (ನಗುತ್ತಾ) ಹಂಗಾ ? ಓಗ್ಲಿ ಬುಡು ನಿಮ್ ಗುಂಪಲ್ಲಿ ಏನೇನೋ ಮಾಡ್ತಾನೇ ಇರ್ತೀರಾ ಹಂಗೆ ಇದೂನೂವಾ

ಹೆಂಡತಿ : (ಆಶ್ಚರ್ಯದಿಂದ) ಹೌದಾ ? ಹಂಗಾದ್ರೆ ನೀವು ಒಪ್ತಿರಾ ಅನ್ನಿ !

ರಂಗಣ್ಣ : ಯಾವುದಕ್ಕೆ ?

ಹೆಂಡತಿ : ವರದಕ್ಷಿಣೆ ಬೇಡಾ ಅಂತ.

ರಂಗಣ್ಣ : ಯಾರಂಗಂದೋರು ?

ಹೆಂಡತಿ : ಮತ್ತೆ ಈಗ್ತಾನೇ ಏಳಿದ್ರಿ ?

ರಂಗಣ್ಣ : ನಿನೋಗಿ ನಿಮ್ ಗುಂಪಲ್ಲಿ ಬಾಯಿ ಬಂದಂತೆ ಪ್ರಮಾಣ ಮಾಡಿ ಬುಟ್ಟು ಬಂದ್ರೆ ನಂಗೇನು? ನಾನು ನನ್ ಮಗನ ಮದುವೇಲಿ ವರದಕ್ಷಿಣೆ ತಗೋಳದಾ ಬುಟ್ ಬುಟ್ಟೇನಾ? ತಲೆ ಎಲ್ಲೋ ಕೆಟ್ಟಿರಬೇಕು ನಿಂಗೆ.

ಹೆಂಡತಿ : ಅಲ್ಲಾರಿ, ದೇವರ ಸಾಕ್ಷಿಯಾಗಿ ಪ್ರಮಾಣ ಮಾಡಿಸ್ಕಂಡ್ರು ರೀ. ಅದ್ನ ಮೀರಿದ್ರೆ ಈಗ ಧರ್ಮಸ್ಥಳದ ಮಂಜುನಾಥ ಸುಮ್ನೆ ಬಿಟ್ಟಾನಾ ?

ರಂಗಣ್ಣ : ಅದೆಲ್ಲ ನಂಗೊತ್ತಿಲ್ಲ. ನೀನು ನನ್ನ ಒಂದ್ ಮಾತೂ ಕೇಳ್ದೇನೇ ಪ್ರಮಾಣ ಮಾಡು ಅಂತ ಯಾರು ಏಳಿದ್ರು ?

ಹೆಂಡತಿ : ಗುಂಪಲ್ಲಿ ಎಲ್ಲೂ ಮಾಡಿದ್ರೂ, ಅದ್ಕೆ ನಾನೂ ಮಾಡ್ದೆ.

ರಂಗಣ್ಣ : ನಿಂಗೆ ಗಂಡ ಹೆಚ್ಚೋ ಗುಂಪು ಹೆಚ್ಚೋ ?

ಹೆಂಡತಿ : ಅಲ್ಲಾರಿ ....

ರಂಗಣ್ಣ : (ಮಧ್ಯೆ ನಿಲ್ಲಿಸುತ್ತಾ) ಅಲ್ಲಾನೂ ಇಲ್ಲ ಬೆಲ್ಲಾನೂ ಇಲ್ಲ. ಗಂಡನ್ನ ಒಂದ್ ಮಾತೂ ಕೂಡಾ ಕೇಳ್ದೇ ಪ್ರಮಾಣ ಮಾಡು ಅಂತ ನಿಂಗೆ ಯಾರು ಏಳಿದ್ರು ?

(ಅಷ್ಟರಲ್ಲಿ ಲಕ್ಷ್ಮಿ ತಾಯಿ ಸದಸ್ಯೆಯಾದ ಗುಂಪಿನ ಸದಸ್ಯೆಯರು ಬರುತ್ತಾರೆ)

ಮಾದೇವಿ : ನಮಸ್ಕಾರ ರಂಗಣ್ಣೋರಿಗೆ, ರಂಗಣ್ಣ ಅಂದ್ರೆ ನೀವೇ ತಾನೇ ? ನೀವು ಅವರ ಮನೆಯವರಿರಬೇಕು. ಶಾಂತವ್ವ, ನಮಸ್ಕಾರ.

ರಂಗಣ್ಣ : ನೀವ್ ಯಾರವ್ವಾ ? ಎಲ್ಲಿಂದ ಬಂದ್ರಿ ? ನನ್ ಎಸ್ರು ಎಂಗೆ ಗೊತ್ತು ನಿಮಗೆ ?

ಮಾದೇವಿ : ನಾವು - ಸ್ವಸಹಾಯ ಗುಂಪಿನ ಸದಸ್ಯೆಯರು. ಗಿರಿಜವ್ವನೂ ನಮ್ಮ ಗುಂಪಿನ ಸದಸ್ಯೆ.

ರಂಗಣ್ಣ : ಯಾವ ಗಿರಿಜವ್ವ ?

ಮಾದೇವಿ : ಅದೇ ನಿಮ್ಮ ಮಗ ಕೃಷ್ಣನಿಗೆ ತಂದುಕೊಳ್ಳೋ ಮಾತಾಗಿದೆಯಲ್ಲಾ ಲಕ್ಷ್ಮಿ ಅಂತ ಹುಡುಗಿ, ಅವರ ಅವ್ವ, ರಾಮಣ್ಣನ ಹೆಂಡ್ತಿ.

ರಂಗಣ್ಣ : ಓಹೋಹೋ ರಾಮಣ್ಣ ಹೆಂಡ್ತಿ ಕಡೆಯೋರಾ ? ಏನ್ಸಮಾಚಾರ ?

ಮಾದೇವಿ : ನೀವು ಲಕ್ಷ್ಮಿನ ನಿಮ್ಮ ಮಗನಿಗೆ ತಂದುಕೋತಿರೋದು ತುಂಬಾ ಒಳ್ಳೇದು, ಅವ್ಳು ತುಂಬಾ ಒಳ್ಳೇ ಹುಡುಗಿ, ಆದರೆ.....

ರಂಗಣ್ಣ : ಏನವ್ವ ? ಏನ್ಸಮಾಚಾರ ? ಹುಡುಗೀ ಬಗ್ಗೆ ಏನಾದ್ರೂ..... ?

ಮಾದೇವಿ : ಛೇ ಛೇ ಹುಡುಗಿ ತುಂಬ ಒಳ್ಳೇಳು. ರಾಮಣ್ಣ ಗಿರಿಜವ್ವಾನೂ ಅಷ್ಟೇ ಮಗಳ್ನ ತುಂಬಾ ಶಿಸ್ತಿನಿಂದ ಸಾಕವರೆ ಆದ್ರೆ.....

ರಂಗಣ್ಣ : ಏನ್ ಆದ್ರೆ ಆದ್ರೆ ಅಂತ ರಾಗ ಎಳೀತಿದ್ದೀರ ? ವಿಷಯ ಹೇಳ್ರೀ.

ಮಾದೇವಿ : ನೀವು ಭಾರಿ ವರದಕ್ಷಿಣೆ ಕೇಳಿದ್ದೀರಂತೆ.

ರಂಗಣ್ಣ : ಹೌದು ಅದಕ್ಕೇನೀಗ ?

ಮಾದೇವಿ : ವರದಕ್ಷಿಣೆ ಕೇಳೋದು, ತಗೋಳದು ಕಾನೂನು ಪ್ರಕಾರ ಅಪರಾಧ....

ರಂಗಣ್ಣ : ಓಹೋಹೋ ಆ ರಾಮಣ್ಣ ತನ್ನ ಕೈಲಾಗಲ್ಲ ಅಂತ ನಿಮ್ಮನ್ನೆಲ್ಲ ಕಳ್ಸವನಾ ? ಮಾಡ್ತೀನ್ ಅವುನಿಗೆ ಶಾಸ್ತಿ. ಇದಕ್ಕೆಲ್ಲ ನಾನು ಬಗ್ಗೋದಿಲ್ಲ ಗೊತ್ತಾಯ್ತಾ?

ಸದಸ್ಯೆ 1 : ನೋಡಿ ರಂಗಣ್ಣೋರೇ, ವರದಕ್ಷಿಣೆ ತಗೋಳ್ಳೋದು ಅಪರಾಧ. ಮದುವೆ ಅನ್ನೋದು ಗಂಡು ಹೆಣ್ಣು ನಡುವಿನ ಸಂಬಂಧ. ಅದೇನೂ ವ್ಯಾಪಾರ ಅಲ್ಲ. ನೀವು ವರದಕ್ಷಿಣೆ ಕೇಳ್ತೀದಿರಿ ಅಂತ ಪೊಲೀಸ್ ಕಂಪ್ಲೆಂಟ್ ಕೊಟ್ರೆ ನಿಮ್ಮನ್ನ ಅರೆಸ್ಟ್ ಮಾಡ್ಕೊಂಡು ಹೋಗ್ತಾರೆ. ಆಮೇಲೆ ಏಳು ವರ್ಷ ಜೈಲಿನ ಕಂಬಿ ಎಣಿಸಬೇಕಾಗುತ್ತೆ ಅಷ್ಟೆ.

ರಂಗಣ್ಣ : ಓಹೋಹೋ...... ಈಗ ನಂಗೆ ಹೆದ್ರಿಸಕ್ಕೆ ಹೊರಟಿದ್ದೀರಾ ? ಪರವಾಗಿಲ್ಲ. ಅದ್ಕೇ ಈ ಹೆಂಗುಸ್ರಿಗೆ ಜಾಸ್ತಿ ಸ್ವಾತಂತ್ರ ಕೊಡಬಾರ್ದು ಅನ್ನೋದು. ಈ ಸಂಘ ಪಂಗ ಮಾಡ್ಕೊಂಡು ಇಷ್ಟು ಜಗಿದುಕೊಂಡ್ ಬುಟ್ಟಿದ್ದೀರಾ ?

ಸದಸ್ಯೆ 2 : ಗುಂಪು ಮಾಡ್ಕೊಂಡು ಒಗ್ಗಟ್ಟಾಗಿರಕ್ಕೆ ಮತ್ತೆ ಅನ್ಯಾಯದ ವಿರುದ್ಧ ಹೋರಾಡಕ್ಕೆ ಸಾಧ್ಯವಾಗಿರೋದು. ಇನ್ನೂ ಎಷ್ಟು ವರ್ಷ ಹೀಗೆ ಅನ್ಯಾಯ ಸಹಿಸಿಕೊಂಡಿರೋದು? ಕಾನೂನು ಅಂದ ಮೇಲೆ ಅದಕ್ಕೆ ತಲೆ ಬಗ್ಗುಸ್ಲೆ ಬೇಕು.

ರಂಗಣ್ಣ : ನಾನು ಯಾರಿಗೂ ತಲೆ ಬಗ್ಗುಸಲ್ಲ. ನಂಗೇನೂ ಭಯ ಇಲ್ಲ. ಇರೋ ಒಬ್ಬಳ ಮಗಳ ಮದುವೆಗೆ ಕಾಸು ಖರ್ಚು ಮಾಡಲಾಗದ ಆ ನಾಮರ್ದನ ಮನೆ ಹೆಣ್ಣೊ ಬೇಡಾ ನಂಗೆ. ಈ ಮದ್ವೇನೂ ಬೇಡಾ ನಾನು ಬೇರೆ ಕಡೆ ಹೆಣ್ಣು ತರ್ತೀನಿ ನನ್ ಮಗನಿಗೆ, ಅವರ ಸಾವಾಸನೇ ಬೇಡಾ.

ಮಾದೇವಿ : (ಸ್ವಲ್ಪ ತಬ್ಬಿಬ್ಬಾಗಿ) ಅದೆಂಗಾಯ್ತದೆ ? ಮಾತು ಕೊಟ್ಟ ಮೇಲೆ ಮುರಿದು ಬೇರೆ ಕಡೆ ಸಂಬಂಧ ಮಾಡ್ತೀನಿ ಅಂದ್ರೆ ನಾವು ಎಲ್ಲ ಕಡೆನೂ ಹೇಳ್ತೀವಿ, ರಂಗಣ್ಣನ ಮಗನಿಗೆ ಯಾರೂ ಹೆಣ್ಣು ಕೊಡಬೇಡಿ ಅಂತ.

(ಅಷ್ಟರಲ್ಲಿ ಕೃಷ್ಣ ಬರುತ್ತಾನೆ)

ಸದಸ್ಯೆ 1 : ನೋಡಪ್ಪಾ ಕೃಷ್ಣ, ಲಕ್ಷ್ಮಿ ತುಂಬ ಒಳ್ಳೇ ಹುಡುಗಿ, ನಿನಗೆ ಒಳ್ಳೆ ಹೆಂಡತಿಯಾಗಿ ಇರ್ತಾಳೆ. ಈಗ ಬರೀ ದುಡ್ಡಿನಾಸೆಗೆ ಅವಳನ್ನು ಬಿಟ್ಟು ಬೇರೆಯವಳನ್ನು ಮದುವೆ ಆಗ್ತೀಯಾ ? ನೀನೇನ್ ಹೇಳ್ತೀಯಾ ? ನಿಂಗೆ ವರದಕ್ಷಿಣೆ ಬೇಕೋ ಒಳ್ಳೇ ಬೇಕೋ ?

ಕೃಷ್ಣ : ಲಕ್ಷ್ಮಿ ಏನೋ ನಾನು ಒಪ್ಪಿದ್ದೀನಿ ಸರಿ. ಹಾಗಂತ ಬರಿಗೈಲಿ ಮದುವೆ ಮಾಡಿಕೊಡ್ತೀನಿ ಅಂದ್ರೆ ಯಾರು ಒಪ್ತಾರೆ ? ನಾನೇನು ಅಷ್ಟು ಗತಿಗೆಟ್ಟೋನಾ ?

ಮಾದೇವಿ : ಇದೇನಪ್ಪಾ ಹಿಂಗೇಳ್ತೀಯಾ ? ವರದಕ್ಷಿಣೆ ತಗೋಳೋದು ಅಪರಾಧ ಅಂತ ನಿಂಗೆ ಗೊತ್ತಿಲ್ವಾ ? ಪೊಲೀಸ್ ಬಂದು ಎಳ್ಕೊಂಡು ಹೋಗ್ತಾರೆ. ಜೈಲಾಗೆ ಏಳು ವರ್ಷ ಕಂಬಿ ಎಣಿಸಬೇಕಾಯ್ತದೆ.

ಕೃಷ್ಣ : ವರದಕ್ಷಿಣೆ ಕೇಳಿದ್ವಿ, ಅವರು ಕೊಟ್ರು ಅಂತ ಸಾಬೀತಾದ್ರೆ ಅಲ್ವ ಅದೆಲ್ಲ. ಹಿಂಗೆ ಪೊಲೀಸ್ ಹೇಳ್ತೀವಿ ಅಂತ ಹೆದರಿಸಿದ್ರೆ ಅವರ ಮನೆ ಹೆಣ್ಣೇ ಬೇಡಾ ನಂಗೆ.

ರಂಗಣ್ಣ : ಅದ್ನೆ ನಾನು ಹೇಳ್ತಿರೋದು ಅಷ್ಟೋತ್ತಿಂದ ಇವೆಲ್ಲ ರಗಳೆ ರಾಮಾಯಣ ಯಾರಿಗೆ ಬೇಕು ಅಂತ.

ಸದಸ್ಯೆ 2 : ಅದ್ಕೆ ನಾವು ಹೇಳಿದ್ದು, ನೀವು ಹಿಂಗೆ ಹಠ ಹಿಡಿದ್ರೆ ನಾವು ಊರಲ್ಲಿ ಯಾರೂ ನಿಮ್ಮ ಮನೆಗೆ ಹೆಣ್ಣು ಕೊಡಬಾರದು ಅಂತ ಪ್ರಚಾರ ಮಾಡ್ತೀವಿ ಅಂತ.

(ರಂಗಣ್ಣ ಕೃಷ್ಣ ಮುಖ ಮುಖ ನೋಡಿಕೊಳ್ಳುತ್ತಾರೆ.)

(ಅಷ್ಟರಲ್ಲಿ ಶಾಂತವ್ವ ಸದಸ್ಯೆಯಾದ ಗುಂಪಿನ ಸದಸ್ಯೆಯರು ಬರುತ್ತಾರೆ)

ಸದಸ್ಯೆ 1 : ಏನ್ ಶಾಂತವ್ವ, ಮಗನಿಗೆ ವರದಕ್ಷಿಣೆ ತಗೋಳ್ಳೋಲ್ಲ ಅಂತ ಮಾತು ಕೊಟ್ಟಿದ್ದೀಯಲ್ಲಾ, ಮಗನಿಗೆ ಮದುವೆ ಅಂತೆ ....

ಶಾಂತವ್ವ : ಹೂಂ ಹೂಂ ..... ಹೌದು ......

ಮಾದೇವಿ : ಶಾಂತವ್ವ ಪ್ರಮಾಣ ಮಾಡವ್ರೆ ?

ಸದಸ್ಯೆ 1 : ಹೂಂ, ನಮ್ಮ ಗುಂಪಿನಲ್ಲಿ ಎಲ್ರೂ ನಮ್ಮ ನಮ್ಮ ಮಕ್ಕಳ ಮದುವೇಲಿ ವರದಕ್ಷಿಣೆ ಕೇಳೋಲ್ಲ, ಕೊಡೋಲ್ಲ ಅಂತ ದೇವರ ಸಾಕ್ಷಿಯಾಗಿ ಪ್ರಮಾಣ ಮಾಡಿದ್ದೀವಿ. ಶಾಂತವ್ವಾನೂ ಮಾಡವಳೆ...

ಮಾದೇವಿ : ಏನ್ ಶಾಂತವ್ವ ಅಲ್ಲಿ ಪ್ರಮಾಣ ಮಾಡಿಬಿಟ್ಟು ಇಲ್ಲಿ ವರದಕ್ಷಿಣೆ ಕೇಳ್ತಾ ಇದ್ದೀರಲ್ಲಾ....

ಶಾಂತವ್ವ : ನಾನೂ ಅದ್ನೆ ಹೇಳ್ತಾ ಇವ್ನಿ ಅವಾಗಿಂದ ......

ಮಾದೇವಿ : ನೋಡಿದ್ರಾ, ನೋಡಿದ್ರಾ, ಹುಡುಗನ ತಾಯಿಗೇ ವರದಕ್ಷಿಣೆ ತಗೋಳೊದು ಇಷ್ಟ ಇಲ್ಲ ಅಂದ ಮೇಲೆ ....

ಸದಸ್ಯೆ 1 : ಗುಂಪಿನ ಸದಸ್ಯೆಯಾಗಿ, ಅವರಿಗೆ ಕಾನೂನು ಪ್ರಕಾರ ಅಪರಾಧ ಮಾಡಿದರೆ ಶಿಕ್ಷೆಯಾಗುತ್ತೆ ಅಂತ ಗೊತ್ತಿದೆ ....

ಶಾಂತವ್ವ : ರೀ ನೀವೂ ಒಪ್ಕೋಳ್ರೀ...

ಮಾದೇವಿ : ಒಪ್ಕೋಳಿ...

ಸದಸ್ಯೆ : ಒಪ್ಕೋ ಕೃಷ್ಣ, ಸುಮ್ಮನೆ ಕೈಯಾರೆ ಬಾಳು ಹಾಳು ಮಾಡಿಕೋ ಬೇಡಾ.

ಕೃಷ್ಣ : (ಸ್ವಲ್ಪ ಚಿಂತಿಸಿ) ಸರಿ, ಒಪ್ಕೊಂಡೆ, ನಂಗೆ ವರದಕ್ಷಿಣೆ ಏನೂ ಬೇಡಾ.

(ಎಲ್ಲರೂ ಜೈಕಾರ ಹಾಕುತ್ತಾರೆ)

(ರಂಗಣ್ಣನ ಕಡೆಗೆ ನೋಡುತ್ತಾರೆ)

ರಂಗಣ್ಣ : (ಅರೆಮನಸ್ಸಿನಿಂದ) ಸರಿ, ಇನ್ನೇನ್ ಮಾಡೋದು

ದೃಶ್ಯ - ಏಳು

(ಪಂಚಾಯಿತಿ ಕಟ್ಟೆ ಹತ್ತಿರ)

ಒಬ್ಬ : ಏನ್ರಪ್ಪಾ, ಕೃಷ್ಣನ ಮದುವೆಗೆ ರಂಗಣ್ಣ ಪೈಸಾ ವರದಕ್ಷಿಣೆ ತಗೋಳಲ್ಲ ಅಂತ ಒಪ್ಪಿಕೊಂಡವ್ನಂತೆ ?

ಇನ್ನೊಬ್ಬ : ಹೌದಾ ? ಪರವಾಗಿಲ್ವೇ ? ಯಾವಾಗ ನೋಡಿದ್ರೂ ವರದಕ್ಷಿಣೆ ವರದಕ್ಷಿಣೆ ಅಂತ ಬಡ್ಕೋತಿದ್ದ ?

ಒಬ್ಬ : ಕಾನೂನು ಕಟ್ಟಳೆ ಇರೋವಾಗ ಹಂಗೆಲ್ಲಾ ಮಾಡಕ್ಕಾಯ್ತಾದೇನಪ್ಪಾ ?

(ಅಷ್ಟರಲ್ಲಿ ರಂಗಣ್ಣ ಬರುತ್ತಾನೆ)

ಇನ್ನೊಬ್ಬ : ಏನ್ ರಂಗಣ್ಣ ? ಅಂತೂ ದೊಡ್ ಮನಸ್ಸು ಮಾಡಿಬುಟ್ಟೆ ಬಿಡಪ್ಪಾ.

ರಂಗಣ್ಣ : ಏನಪ್ಪಾ ಅಂತದ್ದು ನಾನು ಮಾಡಿದ್ದು ?

ಇನ್ನೊಬ್ಬ : ವರದಕ್ಷಿಣೆ ತಗಳ್ದೇ ಮಗನ ಮದುವೆ ಮಾಡ್ತೀನಿ ಅಂದಂತೆ ? ಭಲಾ ಭಲಾ ಭೇಷ್.

ಒಬ್ಬ : ಎಸ್ಟೋ ಜನ ಸುಮ್ಗೆ ಮಾತಾಡ್ತಾರೆ, ನೀನು ಸಾಧಿಸಿ ತೋರಿಸಿಬುಟ್ಟೆ ಕಣಪ್ಪಾ. ನಿಮ್ಮಂತೋರೇ ಲೀಡರ್ ಆಗಬೇಕು.

ಇನ್ನೊಬ್ಬ : ಹೌದು ಕಣ, ಈ ಸಲ ರಂಗಣ್ಣನ್ನ ಎಲೆಕ್ಷನ್‌ಗೆ ನಿಲ್ಲಿಸಿದ್ರೆ ಎಂಗೆ ?

ರಂಗಣ್ಣ : ಆಂ ? ನನ್ನನ್ನು ಎಲೆಕ್ಷನ್‌ಗಾ?

ಒಬ್ಬ : ಹೂ ಕನಪ್ಪ, ಸ್ವಲುಪನಾದ್ರೂ ಆದರ್ಶ ಪಾಲಿಸೋರು ಗೆದ್ದು ಬಂದ್ರೆ ಬೇರೆಯೋರು ಅವ್ರನ್ನ ನೋಡಿ ಕಲೀತಾರೆ. ರಂಗಣ್ಣ ಈ ಸಲ ನೀನು ನಿಲ್ಲೋದು ಗ್ಯಾರಂಟಿ.

ರಂಗಣ್ಣ : (ಆಶ್ಚರ್ಯ) ಆಂ ? ಹೌದಾ ?

ಇನ್ನೊಬ್ಬ : ನೋಡ್ ರಂಗಣ್ಣ, ಈ ಸಲ ನೀನು ಎಲೆಕ್ಷನ್ ನಾಗೆ ಗೆದ್ದು ಬಂದ್ರೆ, ಬಂದ್ರೆ ಏನು, ಗೆದ್ದೆ ಗೆಲ್ತೀಯಾ, ಗೆದ್ದು ಬಂದಾಗ ಈ 'ಎಣ್ಣು ಮಕ್ಕಳಿಗೆ' ಸರ್ಕಾರದಲ್ಲಿ ಏನೇನು ಸೌಕರ್ಯ ಐತೆ ಅದನ್ನೆಲ್ಲ ಸಾಂಗವಾಗಿ ಜನರಿಗೆ ತಲುಪಿಸಬೇಕಪ್ಪಾ.

ರಂಗಣ್ಣ : ಹೆಣ್ಣು ಮಕ್ಕಳಿಗೆ ಸೌಕರ್ಯನಾ ? ಏನಪ್ಪ ಅಂತದ್ದು ?

ಇನ್ನೊಬ್ಬ : ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಬಾಲಿಕಾ ಅಂತ ಯೋಜನೆ ಐತೆ, ಸ್ತ್ರೀ ಶಕ್ತಿ ಅಂತ ಹೆಂಗಸರಿಗೆ ವೈದ್ಯಕೀಯ ಐತೆ, ಹೆರಿಗೆ ಭತ್ಯೆ, ಕೊಡ್ತಾರೆ, ಆಮೇಲೆ ಯಾರ ಮನೇನಿಂದಾಲೇನಾದ್ರೂ ಹೆಣ್ಣು ಮಕ್ಕಳ್ನ ಹೊರಗೆ ಹೋಗಿಬುಟ್ರೆ ಅವರು ಸ್ವಲ್ಪ ದಿನ ಇರಕ್ಕೆ ಅಂತ ಸಾಂತ್ವನ ಅಂತ ಯೋಜನೆ ಐತೆ. ಇದೆಲ್ಲ ತಿಳಿಕಂಡಿರಬೇಕು. ನಾಳೆ ಹೆಂಗಸರನ್ನು ಉದ್ಧಾರ ಮಾಡಬೇಕಾದ್ರೆ.....

ರಂಗಣ್ಣ : ನಾನೇನು ಉದ್ಧಾರ ಮಾಡೋರು ಬುಡಪ್ಪಾ, ಈಗ ಅವರವರೇ ಗುಂಪು ಕಟ್ಟಿಕೊಂಡು ಬೇಕಾದಷ್ಟು ಉದ್ಧಾರ ಆಯ್ತ ಅವ್ರೆ.

ಒಬ್ಬ : ಅದಕ್ಕೆ ಗಂಡಸರ ಅಡ್ಡಿ ಬರದಿದ್ರೆ ಆಯ್ತು ಮತ್ತೆ.

ಎಲ್ಲರು : ಅದೂ ಸರಿ, ಅದೂ ಸರಿ.

### ದೃಶ್ಯ - ಎಂಟು

(ಲಕ್ಷ್ಮಿ ಕೃಷ್ಣರ ಲಗ್ನಪತ್ರಿಕೆ. ಜನ ಸೇರಿದ್ದಾರೆ. ಎರಡೂ ಗುಂಪುಗಳ ಸದಸ್ಯೆಯರೂ ಇದ್ದಾರೆ)

ಮಾದೇವಿ : ನೋಡ್ರಪ್ಪಾ, ನೋಡ್ರಪ್ಪಾ, ಮುಂದಿನ ತಿಂಗಳು ನಮ್ಮೂರ್ರಲ್ಲಿ ಲಕ್ಷ್ಮಿ ಕೃಷ್ಣನ ಮದುವೆ ಐತೆ. ನೀವೆಲ್ಲ ಬಂದು ಗಂಡು ಹೆಣ್ಣಿಗೆ ಆಶೀರ್ವಾದ ಮಾಡಿ ಹೋಗಬೇಕು. ಹಂಗೇ ಲಾಡು ಊಟ ಮಾಡ್ಕೊಂಡು ಹೋಗೀರಂತೆ... ಬರೋದು ಮರಿಬ್ಯಾಡ್ರಪ್ಪೋ ಹಂಗೆ ನಿಮ್ಮನೇ ಮದುವೇಲೂ ವರದಕ್ಷಿಣೆ ಕೇಳಬೇಡಿ, ಕೊಡಬೇಡಿ. ನೀವು ಕೇಳಿದ್ದು, ತಗೊಂಡಿದ್ದು ಗೊತ್ತಾದ್ರೆ ನಾವೆಲ್ಲನಿಮ್ ಮನೆ ಬಾಗಿಲಿಗೇ ಬಂದು ಗಲಾಟೆ ಮಾಡ್ತೀವಿ, ನೆಪ್ಪಿರಲಿ.

☺☺☺ (ಮುಕ್ತಾಯ) ☺☺☺




(ಚಿತ್ರ - 13ಬಿ)

# ಗೃಹಲಕ್ಷ್ಮಿ

: ಪಾತ್ರವರ್ಗ :

1. ಗುರಪ್ಪ
2. ಸರಸು
3. ಸರಸುವಿನ ಮಾವ
4. ಸರಸುವಿನ ಅತ್ತೆ
5. ನಿರೂಪಕಿ
6. ಸರಸುವಿನ ಮೈದುನ - ರಮೇಶ
7. ಪೊಲೀಸ್
8. ಸ್ವಸಹಾಯ ಗುಂಪಿನ ಮಹಿಳೆಯರು

ನಾಟಕ - 3

# ಗೃಹಲಕ್ಷ್ಮಿ

(ಕೌಟುಂಬಿಕ ಕ್ರೌರ್ಯ ವಿರುದ್ಧ ನಾಟಕ)

## ಪಾತ್ರವರ್ಗ :

### ದೃಶ್ಯ - ಒಂದು

ನಿರೂಪಕಿ : ನಮಸ್ಕಾರ, ಇವತ್ತು ನಿಮಗೊಂದು ಕತೆ ಹೇಳ್ತೇನೆ. ಅದು ನಮ್ಮೂರಿನ ಒಬ್ಬಳು ಹುಡುಗಿಯ ಕತೆ. ಹುಡುಗಿ ಹುಟ್ಟಾಜಾಣೆ. ಬುದ್ಧಿವಂತೆ. ಅವರ ತಂದೆ ತಾಯಿ ಅವಳನ್ನು ಮನೆಯಲ್ಲೇ ಕೂರಿಸದೇ ಓದಿಸಿದ್ರು. ಕ್ಲಾಸಿಗೆ ಅವಳೂ ಒಳ್ಳೇ ಅಂಕ ತಗೊಂಡು ಪಾಸಾಗ್ತಾ ಬಂದ್ಲು. ಹತ್ತನೇ ಕ್ಲಾಸಿನಲ್ಲಿ ಒಳ್ಳೇ ಅಂಕ ತಗೊಂಡು ದಾಟಿ ಬಿಟ್ಟಳು. ಇನ್ನು ಹೆಚ್ಚು ಓದೋದೇನೂ ಬೇಡಾ. ಅವಳ ಮದುವೆ ಮಾಡಿಬಿಡೋಣ ಅಂತ ಅವಳ ತಂದೆ ತಾಯಿ ನಿರ್ಧಾರ ಮಾಡಿದ್ರು. ಹದಿನೆಂಟು ತುಂಬವವರೆಗೂ ಕಾದ್ರು - ಯಾಕ್ ಕಾದ್ರೂ ಅಂತ ಕೇಳ್ರೀ - ಹೆಣ್ಣು ಮಕ್ಕಳಿಗೆ ಹದಿನೆಂಟು ತುಂಬುದುಕ್ಕೆ ಮೊದಲು ಮಾಡೋದು ಕಾನೂನು ಪ್ರಕಾರ ಅಪರಾಧ. ಜೊತೆಗೇ ಎಳೇ ಹುಡುಗಿ ದಾಂಪತ್ಯ ಜೀವನಕ್ಕೂ ಸಿದ್ಧರಾಗಿರುವುದಿಲ್ಲ. ಹಾಗಾಗಿ ಹದಿನೆಂಟಕ್ಕೆ ಮೊದಲು ಮದುವೆ ಮಾಡಲೇ ಬಾರದು. ಇರಲಿ, ಸರಸ್ವತಿಗೆ ಹದಿನೆಂಟು ತುಂಬಿದೆ ನಂತರ ಮದುವೆ ಮಾಡಕ್ಕೆ ಹೋದಾಗ ಗಂಡುಗಳು ನಾ ಮುಂದು ತಾ ಮುಂದೆ ಅಂತ ಸಾಲುಗಟ್ಟಿದರು. ಒಂದಿಬ್ಬರೇನೋ ವರದಕ್ಷಿಣ ಅದೂ ಇದೂ ಅಂತ ಬೇಡಿದರು. ಆದರೆ ಸರಸ್ವತಿಯ ತಂದೆ ತಾಯಿಗಳು, ವರದಕ್ಷಿಣೆ ಕೊಡೋದು ತಗೋಳೋದು ಎರಡೂ ಕಾನೂನಿನ ಪ್ರಕಾರ ಅಪರಾಧ ಅಂತ ವರದಕ್ಷಿಣೆ ಕೇಳುವವರಿಗೆ ಮಗಳನ್ನ ಕೊಡಲ್ಲ ಅಂತ ನಿರ್ಧಾರ ಮಾಡಿದ್ರು. ಕೊನೆಗೆ ಸರಸ್ವತಿಯನ್ನು ಗುರಪ್ಪ ಎನ್ನುವವನಿಗೆ ಕೊಟ್ಟು ಮದುವೆ ನಿಶ್ಚಯವಾಯಿತು. ನಿಶ್ಚಯ. ಏನು ಬಂತು. ಎರಡೇ ತಿಂಗಳಲ್ಲಿ ಮದುವೆಯೂ ಆಗಿ ಹೋಯಿತು.

(ನಿರೂಪಕಿ ಹಿಂದೆ ಸರಿಯುತ್ತಾಳೆ)

### ದೃಶ್ಯ - ಎರಡು

ಗುರಪ್ಪ : ಸರಸೂ...ಏ ಸರಸೂ....

ಸರಸು : ಏನ್ರೀ, ಯಾಕ್ ಕೂಗ್ತಿದ್ದೀರಿ ?

ಗುರಪ್ಪ : ನಿನ್ನೇ ಹಾಕ್ಕೊಂಡಿದ್ ಅಂಗಿ ಒಗೆದು ಹಾಕಿದಿಯೇನು ?

ಸರಸು : ಹೂಂನ್ರೀ, ಹೊರಗೆ ಒಣಗಿ ಹಾಕಿದ್ದೀನಿ.

ಗುರಪ್ಪ : ಅದ್ನ ತಂದು ಬೇಗ ಇಸ್ತ್ರಿ ಮಾಡಿಕೊಡು ಹೊರಗೆ ಹೋಗಬೇಕು.

ಮಾವ : ಸರಸವ್ವಾ, ಏ ಸರಸವ್ವಾ

ಸರಸು : ಏನ್ ಮಾವಾ ?

ಮಾವ : ವಸಿ ಈ ಎಲೆ ಅಡಿಕೆ ಕುಟ್ಟಿಕೊಡವ್ವಾ

ಸರಸು : ಕೊಡಿ

ಅತ್ತೆ : ಸರಸೀ... ಏ ಸರಸೀ

ಸರಸು : ಏನತ್ತೇ ?

ಅತ್ತೆ : ಒಲೆ ಮೇಲೆ ಬೇಳೆ ಬೇಯಕ್ಕೆ ಹಾಕಿದ್ದೀನಿ ನೋಡು, ಹಾಗೇ ಆ ಕಾಯಿ ತುರಿದಿಡು, ಕಾಯಿ ಬೇಳೆ ಹಾಕ್ಕೊಂಡು ಬೆಲ್ಲ ಸೇರ್ಸಿ ಒಲೆ ಮೇಲಿಡು, ಹೂರಣ ಮಾಡಬೇಕು. ಒಬ್ಬಟ್ಟು ತಟ್ಟಬೇಕಂತೆ ಇವತ್ತು, ಯಜಮಾನ್ರು ಹೇಳವರೆ, ಹಂಗೆ ಸ್ವಲ್ಪ ಅಸೀಟು ಕಲಿಸಿ ಇಟ್ಟುಬಿಡು.

ಸರಸು : ಸರಿ ಅತ್ತೆ.

ಅತ್ತೆ : ಹಂಗೇ ಎರಡು ಪಾವು ಕಡಲೇ ಬೇಳೇನೂ ನೆನೆಸಿಹಾಕಿ ಬಿಡು, ವಡೆ ಮಾಡಾನಾ ಆಮೇಲೆ ಸರಸೀ

ಸರಸು : ಏನತ್ತೇ ?

ಅತ್ತೆ : ಸಾರಿಗೆ ವಸಿ ಖಾರ ಅರೆದುಬುಡು, ಹೊತ್ತಾಯ್ತು.

ಸರಸು : ಸರಿ ಅತ್ತೆ

ಗುರಪ್ಪ : ಸರಸೂ....

ಸರಸು : ಏನ್ರೀ ?

ಗುರಪ್ಪ : ಇಸ್ತ್ರೀ ಮಾಡಿದ್ದಾಯ್ತಾ ?

ಸರಸೂ : ಮಾಡ್ತಾ ಇದ್ದೀನಿ, ಬಂದೇ

ಮಾವ : ಎಲೆ ಅಡಿಕೆ ಕುಟ್ಟಿದಿಯಾ ತಾಯಿ ?

ಸರಸೂ : ಬಂದೇ ಮಾವ

ಮಾವ : ಬೇಗ ಕೊಡವ್ವ

ಗುರಪ್ಪ : ಬೇಗ ಕೊಡೇ

ಅತ್ತೆ : ಇಳ್ಸಿದಿಯೇನೇ ಬೇಳೆಯಾ ?

ಸರಸು : ಬಂದೇ ಅತೇ, ಇಕ್ಕೋಳ್ರಿ ಅಂಗಿ, ತಗಳಿ ಮಾವ

ಅತ್ತೆ : ಅಯ್ಯಯ್ಯೋ, ಬೇಳೆ ಎಲ್ಲಸೀದು ಹೊಯ್ತಲ್ಲೇ ಹೋಯ್ತು ಹೋಯ್ತು ಎಲ್ಲ ಸೀದು ಹೋಯ್ತು ನಿಮ್ಮಪ್ಪನ ಮನೆಯಿಂದ ತಂದಿದ್ಯೇನೇ ಬೇಳೆಯಾ ? ಏನ್ ಮಾಡ್ತಿದ್ಯೇ ಅವಾಗ್ಲಿಂದ ಬಡ್ಕೋತಾನೇ ಇದೀನಿ ಯಾವನ ಜೊತೆ ಸರಸವಾಡಿಕೊಂಡು ಕೂತಿದ್ದೇ ? (ಗುದ್ದುತ್ತಾಳೆ)

ಸರಸು : ಇಸ್ತ್ರಿ ಮಾಡ್ತಿದ್ದೆ ಅತ್ತೆ..

ಅತ್ತೆ : ಅಹಹಾ, ಗಂಡನ್ನ ಮರುಳು ಮಾಡಕ್ಕೆ ಏನ್ ಬೇಕೋ ಅದ್ನ ಚೆಂದಾಗ್ ಮಾಡ್ತೀಯ ಈಗ ಈ ಸೀದಿರೋ ಬೇಳೇನಾ ಏನ್ ಮಾಡ್ಲಿ ? ನಿನ್ ತಲೇ ಮೇಲೆ ಸುರೀಲಾ ?

ಗುರಪ್ಪ : ಏನವ್ವಾ ಅದೂ ?

ಅತ್ತೆ : ನೋಡೋ ನಿನ್ ಹೆಣ್ತಿ ಬೇಳೇನೆಲ್ಲಾ ಸೀದಾಕ್ಸಿರೋದಾ.

ಗುರಪ್ಪ : ಓಗ್ಲಿ ಬುಡುವ್ವ, ನಾನು ಹೊಂಟೆ.

ಮಾವ : ಸರಸವ್ವಾ...

ಅತ್ತೆ : ಅವಳನ್ನೇನ್ ಕರೀತಿರಿ ? ಬೇಳೇ ಎಲ್ಲ ಸೀದಾಕ್ಸವಳೆ.

ಮಾವ : ಯಾಕಂತೆ ?

ಅತ್ತೆ : ತಿಂದು ಕೊಬ್ಬ್ ಜಾಸ್ತಿ ಆಗಿದೆ ಅದ್ಕೇ.

ಮಾವ : ಏ ಸರಸವ್ವಾ, ಇನ್ನೊಂದು ಎಲೆ ಅಡಿಕೆ ಕುಟ್ಟಿಕೋಡ್ ಬಾ

ಸರಸೂ : ಅಡಿಗೆ ಮನೆ ಕೆಲ್ಸ ಮುಗ್ಲಿ ಬಂದ್ ಕುಟ್ಟಿಕೊಡ್ತೀನಿ ಮಾವ

ಮಾವ : (ಎದ್ದು ಬಂದು ಕಪಾಳಕ್ಕೆ ಬಿಗಿದು) ಏನಂದೇ ? ಆಮೇಲೆ ಕುಟ್ಟಿಕೊಡ್ತೀನಿ ಅಂತೀಯಾ ? ಎಷ್ಟೇ ಕೊಬ್ಬು ನಿಂಗೆ ? ಮನೆ ಸೊಸೆ ಅಂದ್ರೆ ಮಾವಂಗೇ ಎದುರುತ್ತರ ಕೊಡ್ತೀಯಾ ? ಹೂತಾಕ್ ಬಿಡ್ತೀನಿ ನೋಡು ನಿನ್ನ. ಮನೆಕೆಲ್ಸ ಎಲ್ಲ ಚೆಂದಾಗ್ ಮಾಡ್ತಾಳೆ ಅಂದ ? ಅತ್ತಾಗೆ ಕಾಸೂ ಇಲ್ಲ ಇತ್ತಾಗೆ ಕೆಲ್ಸಾನೂ ಇಲ್ಲ ಕುಟ್ಟ್ ಕೊಡೇ

ಸರಸೂ : (ಹೆದರುತ್ತ ಬೇಗ ಬೇಗ ಕುಟ್ಟಿ ಕೊಡುತ್ತಾಳೆ)

ಅತ್ತೆ : ಏ ಸರಸೀ, ಅಲ್ಲೇನ್ ಮಾಡ್ತಾ ಇದ್ದೀಯಾ ?

ಸರಸೂ : ಎಲೆ ಅಡಿಕೆ ಕುಟ್ಟಿಕೊಡ್ತಿದ್ದೀನಿ ಅತ್ತೆ.

ಅತ್ತೆ : ಅಹಹಾ, ಇಷ್ಟೊತ್ತು ಗಂಡನ್ನ ಬುಟ್ಟೀಲಿ ಹಾಕ್ಕೊಂಡಿದ್ದಲ್ಲದೇ ಈಗ ಮಾವನ್ನ ಮರಳು ಮಾಡಕ್ಕೆ ಹೊಂಟಿದ್ದೀಯೇನೇ ಚಿನಾಲಿ ? (ಗುದ್ದುತ್ತಾಳೆ)

(ಸರಸೂ ಅಳುತ್ತಾಳೆ.)

ದೃಶ್ಯ - ಮೂರು

ನಿರೂಪಕಿ : ಇದು ಒಂದು ದಿನದ ಕತೆ ಅಲ್ಲ, ದಿನನಿತ್ಯ ಇದೇ ರಾಮಾಯಣ. ಅತ್ತೆ ಮಾವ ಗಂಡ - ಮೂವರ ಚಾಕರಿ ಎಷ್ಟೇ ಮಾಡಿದರೂ ಸಾಕಾಗುತ್ತಿರಲಿಲ್ಲ. ದಿನ ನಿತ್ಯ ಮೂವರಿಂದ ಬೈಯ್ಗಳ, ಹೊಡೆತ ತಿನ್ನುವುದೂ ತಪ್ಪುತ್ತಿರಲಿಲ್ಲ. ಅಷ್ಟರಲ್ಲಿ ಪಟ್ಟಣದಲ್ಲಿ ಓದುತ್ತಿದ್ದ ಅವಳ ಮೈದುನ ರಜೆಗೆ ಊರಿಗೆ ಬಂದ. ಅವನು ಎಂತಹವನು ಅಂದ್ರೆ... ನೀವೇ ನೋಡಿ (ಹಿಂದೆ ಸರಿಯುತ್ತಾಳೆ)

ಮೈದುನ : ಅತ್ತಿಗೆ, ಅತ್ತಿಗೆ...

ಸರಸು : ಏನಪ್ಪಾ ರಮೇಶಾ ?

ರಮೇಶ : ಅಲ್ಲಾ ನಾನು ರಜೆಗೆ ಅಂತ ಬಂದಿದ್ದೀನಿ ಏನು ಸ್ವಲ್ಪ ನೊಡ್ಕೋಳ್ಳೋದು ನೋಡ್ಕೋಳೋದೂ ಏನು ಬೇಡ್ವಾ.

ಸರಸು : ಈಗ ಏನಾಗಬೇಕಿತ್ತಪ್ಪಾ ?

ರಮೇಶ : ಒಂದು ಲೋಟ ಕಾಫಿ ಕಾಯ್ಸಿಕೊಡಿ.

ಸರಸು : ಅಷ್ಟೇ ತಾನೇ ? ಕೊಡ್ತಿನಿ ತಾಳು.

(ಅವಳು ಒಳಗೆ ಬಂದಾಗ ರಮೇಶನೂ ಅವಳ ಹಿಂದೆಯೇ ಒಳಗೆ ಬರುತ್ತಾನೆ. ಅವಳು ಪಾತ್ರೆ ಎತ್ತಿಕೊಕಂಡು ತಿರುಗಿದರೆ, ತೀರಾ ಅವಳ ಹತ್ತಿರವೇ ನಿಂತಿದ್ದಾನೆ.)

ಸರಸು : ವಸಿ ದೂರ ನಿಂತ್ಕೋ ರಮೇಶಾ, ಅಲ್ಲಿಕ್ಕೋ ಹೋಗು, ಕಾಫಿ ತಂದುಕೊಡ್ತೀನಿ.

ರಮೇಶ : ದೂರ ಯಾಕೆ ? ಹತ್ರ ನಿಂತಿಕೋ ಬಾರ್ದಾ ?

ಸರಸು : ಇದೇನಪ್ಪಾ ಹಿಂಗೆ ಕೇಳ್ತೀಯಾ ? ಮೈದುನ ಅಂದ್ರೆ ಮಗನ ಥರ....

ರಮೇಶ : ಮಗನ ಥರ ಅಂದ್ರೆ ಮಡಿಲಲ್ಲಿ ಮಲಗಿಸಿ ಕೊಳ್ಳಿ ಮತ್ತೆ

ಸರಸು : (ಕೆರಳಿ) ಥೂ ನಿನ್ನ, ನಾಲಿಗೆ ಬಿಗಿ ಹಿಡಿ ಎಂಥಾ ಮಾತಾಡ್ತೀಯಾ ? ನಿನ್ ನಾಲಿಗೇಗೆ ಹುಳ ಬೀಳ.

ರಮೇಶ : ಹ್ಹ ಹ್ಹ ಹ್ಹ (ನಗುತ್ತಾ) ನಾನು ನಾಲಿಗೆ ಬಿಗಿ ಹಿಡೀತೀನಿ, ನೀವು ಸ್ವಲ್ಪ ನನ್ನ ನೋಡ್ಕಂಡ್ರೆ ಆಯ್ತು, ಅಣ್ಣ ಹೇಗಿದ್ರು ಬರೋದು ರಾತ್ರಿಗೇ...

ಸರಸು : ಅಯ್ಯೋ ಶಿವನೇ ! ಇದೇನ್ ಬುದ್ದಿ ಬಂತೋ ನಿಂಗೆ ರಮೇಶಾ ? ಇಂತಾ ಹಲ್ಕಾ ಮಾತ್ ಆಡ್ತಾ ಇದ್ದೀಯಲ್ಲಾ ನಿಂಗೇ ಒಳ್ಳೇದಾಗಲ್ಲ.

ರಮೇಶ : ಒಳ್ಳೇದಾಗಬೇಕಾದ್ರೆ ನೀನ್ ಮನಸ್ಸು ಮಾಡಬೇಕು, ಎಲ್ಲಿ ಸ್ವಲ್ಪ ಹತ್ರ ಬಾ ನೋಡೋಣಾ (ಹತ್ತಿರ ಬರುತ್ತಾನೆ)

ಸರಸು : ಥೂ ನಾಯಿ (ಛಟೀರನೆ ಕೆನ್ನಗೆ ಬಿಗಿಯುತ್ತಾಳೆ)

(ಅದೇ ಹೊತ್ತಿಗೆ ಅತ್ತೆ ಬರುತ್ತಾಳೆ)

ಅತ್ತೆ : ಏ.. ಏ... ಯಾಕೇ ನನ್ ಮಗನಿಗೆ ಹೊಡೀತಿದ್ದೀಯಾ ? ಚಾಂಡಾಳಿ, ನಾನ್ ನನ್ ಮಗನಿಗೆ ಒಂದೇಟು ಹಾಕಿಲ್ಲ ಅಂತಾದ್ರಲ್ಲಿ....

ರಮೇಶ : ಹೋಗ್ಲಿ ಬಿಡವ್ವಾ, ನಮ್ ಹಣೆ ಬರಹ ಸರಿಗಿಲ್ಲ, ಇಂತಾ ರಾಕ್ಷಸಿ ನಮ್ ಅಣ್ಣಂಗೆ ಹೆಂಡತಿಯಾಗಿ ಬರಬಾರದಿತ್ತು.

ಸರಸು : ಆಂ ? ಏನ್ ಹೇಳ್ತೀದ್ದೀಯಾ ?

ಅತ್ತೆ : ಏನ್ ಮಾಡಿದ್ಲೋ ಅವಳೂ ?

ರಮೇಶ : ಹೋಗ್ಲಿಬಿಡವ್ವಾ, ಮೈಯಲ್ಲಿ ನೆಣಾ ಇದ್ರೆ ಏನೇನೋ ಆಯ್ತದಂತೆ.....

ಅತ್ತೆ : ಹಾಂ ! ? ಹಂಗಾ ? ಏನ್ ಮಾಡಿದ್ಲೋ ಅವಳು ?

ರಮೇಶ : ನಾನು ಅತ್ತಿಗೆ ಅತ್ತಿಗೆ ಒಂದು ಲೋಟ ಕಾಫಿ ಕೊಡೀ ಅಂದೆ.

ಅತ್ತೆ : ಕಾಸ್ ಕೊಡಕ್ಕೆ ಏನಂತೆ ಅವಳಿಗೆ ಧಾಡಿ ? ಅವರಪ್ಪನ ಮನೇದು ಏನಂಗೆ ಗಂಟು ಹೋಗೋದು ?

ರಮೇಶ : ನಾನ್ ಹಜಾರದಲ್ಲಿ ಕೂತಿದ್ದೆ. ಅತ್ತಿಗೆ ಕಾಫಿ ಆಯ್ತು, ತಗೋ ಬಾ ಅಂತ ಕರದ್ಲು.

ಅತ್ತೆ : ತಂದ್ ಕೊಡಕ್ಕೆ ಏನಾಗಿತ್ತಂತೆ ಮಿಟಕಲಾಡಿಗೆ ?

ರಮೇಶ : ನಾನು ಏನೋ ಪಾಪ ಅಂತ ಒಳಗೆ ಬಂದೆ. ಇವ್ಳು ಕಾಫಿ ಕೊಡ್ತಾ ಮೈಮೇಲೆ ಬಿದ್ಲು !

ಅತ್ತೆ : ಆಂ ? ಹಂಗಾ ? ಅಯ್ಯೋ ಶಿವನೇ !

ಸರಸೂ : ಏ ರಮೇಶಾ, ಸುಳ್ ಹೇಳ್ತೀಯಾ ?

ಅತ್ತೆ : ಸುಮ್ನಿರೆ, ಚಾಂಡಾಳಿ, ಮಾಡೋದೆಲ್ಲ ಮಾಡಿ ಈಗ ನಾಟ್ಕ ಆಡ್ತೀಯಾ ಹಾದರಗಿತ್ತಿ.

ರಮೇಶ : ನಾನಂದೆ, ಅತ್ತಿಗೆ, ಅತ್ತಿಗೆ ಅಂದ್ರೆ ತಾಯಿ ಸಮಾನ ದೂರ ಇರಿ ಅಂದೆ. ಅದಕ್ಕೆ ಅವಳು.... ಅವಳು... ಥೂ ಬಿಡವ್ವ, ಮಾಡಿದೋರ ಪಾಪ ಆಡಿದೋರ ಬಾಯಲ್ಲಿ ಅಂತಾರೆ.

ಅತ್ತೆ : ಹಾಂ ! ? ಇಂತಾ ಕೆಲ್ಸ ಮಾಡಿದ್ಲ ?

ರಮೇಶ : ಅಷ್ಟೇ ಅಲ್ಲ ಕಣವ್ವಾ, ನಿಮ್ಮಣ್ಣ ಬರೋದು ರಾತ್ರಿ ಲೇಟಾಯ್ತದೆ, ಅಷ್ಟೊರಳಗೇ ನಾನು.... ಥೂ ಬಿಡವ್ವ ಅಸಯ್ಯ.

(ಅತ್ತೆ ಹಿಡಿದು ಚೆನ್ನಾಗಿ ಹೊಡೆಯುತ್ತಾಳೆ.)

ಅತ್ತೆ : ಬರ್ಲಿ ನನ್ಮಗ ನಿಂಗೆ ಮಾಡಿಸ್ತೀನಿ ತಾಳು (ಹೋಗುತ್ತಾಳೆ)

(ಸರಸೂ ಅಳುತ್ತಾ ಬಿದ್ದಿದ್ದಾಳೆ.)

ರಮೇಶ : (ಹತ್ತಿರ ಬಂದು) ಎಂಗಿತ್ತು ನನ್ ಟ್ರಿಕ್ ? ಸುಮ್ನೆ ಬಾಯಿ ಮುಚ್ಚಿಕೊಂಡು ನನ್ ಮಾತು ಕೇಳಿದ್ರೆ ಸರಿ, ಇಲ್ದಿದ್ರೆ ಊರೆಲ್ಲ ತಮಟೆ ಬಾರಿಸ್ತೀನಿ ? ನಿನ್ ಮಾತ್ನ ಯಾರೂ ನಂಬಲ್ಲ, ಎಲ್ರೂ ನನ್ನನ್ನೇ ನಂಬೋದು, ನೀನು ಹೆಂಗ್ಸು ನಾನು ಗಂಡ್ಸು ಇವತ್ತಲ್ಲ ನಾಳೆ ನೀನು ನನ್ನ ಕೈಗೆ ಸಿಗಲೇಬೇಕು. ಸುಮ್ನೆ ತಕರಾರು ಇಲ್ಲದೇ ಒಪ್ಪಿಕೋ.....

(ಸಿಳ್ಳೆ ಹಾಕುತ್ತಾ ಹೋಗುತ್ತಾನೆ)

(ಸರಸೂ ದುಃಖ, ದಿಗ್ಭ್ರಾಂತಿಯಿಂದ ನೋಡುತ್ತಾಳೆ)

## ದೃಶ್ಯ - ನಾಲ್ಕು

ಗುರಪ್ಪ : ಸರಸೂ.... ಏ ಸರಸೂ ಅವ್ವಾ ಸರಸೂ ಎಲ್ಲವ್ವಾ ?

ಅತ್ತೆ : ಅಯ್ಯೋ ಬಂದೇನಪ್ಪಾ, ನನ್ ಮಗಾ ? ಅವಳ ಕತೆ ಏನ್ ಕೇಳ್ತಿ ? ಮಾಡೋದ್ನೆಲ್ಲ ಮಾಡಿ ಈಗ ಮಳ್ಳಿ ಥರ ಕುಂತವಳೆ ನೀನೇ ಹೋಗಿ ಕೇಳು.

ಗುರಪ್ಪ : ಏನ್ ಮಾಡಿದ್ಲವ್ವಾ ಅವಳೂ ?

ಅತ್ತೆ : ನಾನ್ ಯಾವ ಬಾಯಲ್ಲಿ ಹೇಳ್ಳಿ ಬುಡು.

ಗುರಪ್ಪ : ಅದೇನ್ ಮಾಡಿದ್ಲು ಹೇಳವ್ವ, ಅವಳ ಚಮಡಾ ಸುಲಿದು ಹಾಕಿ ಬಿಡ್ತೀನಿ ಇವತ್ತು.

ಅತ್ತೆ : ಅವಳೂ ರಮೇಶನ ಕೂಡಾ ಸರಸ ಆಡ್ತಿದ್ಲು ಕಣೋ.

ಗುರಪ್ಪ : ಆಂ ? ಏ ಸರಸೀ (ಕೋಪದಲ್ಲಿ ಮೂಲೆಯಲ್ಲಿರುವ ಸರಸಿಯನ್ನು ಎಳೆದು ಹೊಡೆಯುತ್ತಾನೆ)

ಸರಸು : ಇಲ್ಲಾರೀ ಇಲ್ಲಾರೀ ನಾನು ತಪ್ಪು ಮಾಡಿಲ್ಲ, ರಮೇಶ ನನ್ ಮಗನ ಥರ ಅವ್ರು ಸುಳ್ಳು ಹೇಳ್ತಾ ಇದ್ದಾರೆ....

ಗುರಪ್ಪ : ನಮ್ಮವ್ವಾನೇ ಸುಳ್ಳು ಅಂತೀಯಾ ? ಎಷ್ಟೇ ಕೊಬ್ಬು ನಿಂಗೆ (ಹೊಡೆಯುತ್ತಾನೆ)

ಸರಸು : ಇಲ್ಲರಿ, ನಾನು ಸುಳ್ಳು ಹೇಳ್ತಿಲ್ಲ ನಾನ್ ತಪ್‌ಮಾಡಿಲ್ಲ....

ಗುರಪ್ಪ : ನಡೀ ನಿಮ್ಮಪ್ಪನ ಮನೇಗೇ

(ಎಳೆದುಕೊಂಡು ಹೋಗುತ್ತಾನೆ)

ದೃಶ್ಯ - ಐದು

(ಪಕ್ಕದ ಮನೆ)

ಹೆಂಡತಿ : ರೀ.... ಈ ಸರಸ್ವತಿ ಪಾಡು ನೋಡಕ್ಕಾಗಲ್ಲ ರೀ....

ಗಂಡ : ಏನಯ್ತು.....?

ಹೆಂಡತಿ : ಈ ಗಂಡ ಅತ್ತೆ ಮಾವ ಮೂರು ಜನಾನೂ ದಿನಾ ಅವಳ್ನ ಹಿಡಿಕೊಂಡು ಒಂದೇ ಸಮ ಚಚ್ತಾರೆ ಇವತ್ತು ನೋಡಿದ್ರೆ.....

ಗಂಡ : ಏನಾಯ್ತು ಇವತ್ತು ?

ಹೆಂಡತಿ : ಆ ಗುರಪ್ಪನ ತಮ್ಮ ರಮೇಶ ಬಂದಿದ್ದಾನೆ. ಅವನು ಮಹಾ ಘಟಿಂಗ ಪಟ್ಟಣದಲ್ಲಿ ಕಾಲೇಜು ಓದ್ತಿದ್ದಾನೆ ಬರೀ ಕೆಟ್ ಹೆಸರೇ ತಗೋಂಡಿದ್ದಾನೆ. ಅವನು ಈ ಸರಸ್ವತಿ ಮೇಲೆ ಚಾಡಿ ಹೇಳಿ ಪಾಪ ಎಷ್ಟು ಹೊಡೆಸ್ದ ಗೊತ್ತಾ ?

ಗಂಡ : ಏನಂತ ಚಾಡೀ ಹೇಳ್ದ ?

ಹೆಂಡತಿ : ಸರಸ್ವತಿ ತನ್ನ ಮೈಮೇಲೆ ಬಿದ್ಲು ಅಂತ.

ಗಂಡ : ಛೇ ಛೇ ಛೇ, ಅವಳು ಅಂತೋಳಾ ?

ಹೆಂಡತಿ : ಬಿಡ್ತು ಅನ್ನಿ. ಅವಳ್ಯಾಕೆ ಅಂತೋಳಾಗ್ತಳೆ ನಂಗೆ ಈ ರಮೇಶನ ಮೇಲೆ ಅನುಮಾನ

ಗಂಡ : ಏನ್ ಅನುಮಾನ ?

ಹೆಂಡತಿ : ಅವನೇ ಅವಳಿಗೆ ಏನೋ ಅಂದಿರಬೇಕು. ಅವಳು ಬೈದಿದ್ದಕ್ಕೆ ಹಿಂಗೆ ನಾಟ್ಕ ಮಾಡಿದ್ದಾನೆ ಅಂತ.

ಗಂಡ : ಇದು ಲೈಂಗಿಕ ಕಿರುಕುಳ ಕಣೆ. ಇದೂ ಕಾನೂನಿನ ಪ್ರಕಾರ ಶಿಕ್ಷಾರ್ಹ ಅಪರಾಧ.

ಹೆಂಡತಿ : ಏ... ಏನ್ರೀ.... ಮನೆಯವರ ಮೇಲೆ ಹಿಂಗೆ ಹೇಳಕ್ಕಾಯ್ತದಾ ?

ಗಂಡ : ನಿಂಗೆ ಗೊತ್ತಿಲ್ಲ ಕಣೇ, ಎಷ್ಟೋ ಮನೆಗಳಲ್ಲಿ ಗಂಡಸರೇ ಹಂಗಸರಿಗೆ ಕಿರುಕುಳ ಕೊಡ್ತಾರೆ. ಅಸಭ್ಯವಾಗಿ ನೋಡೋದು, ಪೋಲಿ ಮಾತಾಡೋದು, ಕರೆಯೋದು, ಮೈಕೆ ಮುಟ್ಟೋದು, ತನ್ನ ಜೊತೆ ಸರಸವಾಡಕ್ಕೆ ಒಪ್ಪದಿದ್ರೆ ಬೇರೆ ಥರ ಕಿರುಕುಳ ಕೊಡೋದು. ಇದೆಲ್ಲ ಲೈಂಗಿಕ ಹಿಂಸೇನೇ. ಒಂದೇ ಮನೇಲಿ ಇದ್ದುಕೊಂಡು ಅದನ್ನ ದಿನ ದಿನಾ ಸಹಿಸಕ್ಕೆ ಆಗುತ್ತಾ ?

ಹೆಂಡತಿ : ಮತ್ತೆ ಹಂಗಾದಾಗ ಏನು ಮಾಡಬೇಕ್ರೀ ? ಎಲ್ಲಿಗೆ ತಾನೇ ಹೋಗಕ್ಕೆ ಸಾಧ್ಯ ?

ಗಂಡ : ನೋಡೂ ಮೊದ್ಲು ಹೆಂಗಸರು ಧೈರ್ಯನ ತಂದುಕೋಬೇಕು. ಲೈಂಗಿಕ ಕಿರುಕುಳದ ಬಗ್ಗೆ ಹೇಳಕ್ಕೆ ನಾಚಿಕೆ ಪಟ್ಟುಕೊಂಡು ಸುಮ್ಮನಿದ್ದು ಬಿಡಬಾರದು. ಪೊಲೀಸ್ ಕಂಪ್ಲೇಂಟು ಆದ್ರೂ ಕೊಡಬೇಕು.

ಹೆಂಡತಿ : ಪೊಲೀಸೋರು ಏನ್ ಮಾಡ್ತಾರೆ ?

ಗಂಡ : ಏನ್ ಮಾಡ್ತರೆ ಅಂದ್ರೆ ? ಹಿಡಿದು ಜೈಲಿಗೆ ಹಾಕ್ತಾರೆ ದಂಡ ಹಾಕ್ತರೆ ಗೊತ್ತಾ ? ಎಲ್ಲಿಗೆ ಹೋಗಬೇಕು ಅಂದ್ಯಲ್ಲಾ, ಸಾಂತ್ವನ ಕೇಂದ್ರ ಇಲ್ಲವಾ ? ಅಲ್ಲಿಗೆ ಹೋಗಿ ಸಹಾಯ ಕೇಳಬೇಕು. ಇಂತಾ ಕಷ್ಟದಲ್ಲಿರೋ ಹೆಂಗಸರಿಗೋಸ್ಕರ ಸಾಂತ್ವನ ತೆಗೆದಿರೋದು.

ಹೆಂಡತಿ : ಸರಿ, ಅದನ್ನ ಹುಡಕ್ಕಂಡು ಯಾರ್ ಹೋಗ್ತಾರೆ ಬಿಡಿ.

ಗಂಡ : ಏ... ಎಲ್ಲೂ ಹೋಗಬೇಕಾಗಿಲ್ಲ ಕಣೇ. ಅದಕ್ಕೆ ಫೋನ್ ಮಾಡಿದ್ರೆ ಕಾಸು ಕೊಡಬೇಕಾಗಿಲ್ಲ. 1091 ಅದರ ನಂಬರು. ಯಾವ ಫೋನ್ ಬೂತಾಗಾದರೂ ಹೋಗಿ ಅದಕ್ಕೆ ಉಚಿತವಾಗಿ, ಫ್ರಿಯಾಗಿ ಫೋನ್ ಮಾಡಬಹುದು. ಕಾಸೂ ಕೊಡಬೇಕಾಗಿಲ್ಲ.

ಹೆಂಡತಿ : ಹೌದೇನ್ರೀ ? ಮತ್ತೆ ಅವರು ಏನ್ ಮಾಡ್ತಾರೆ ?

ಗಂಡ : ಅದು ದಿನದ 24 ಗಂಟೆ ತೆಗೆದಿರುತ್ತೆ ಯಾವಾಗ ಬೇಕಾದ್ರೂ ಫೋನ್ ಮಾಡಬಹುದು. ಹೀಗೆ ಅತ್ತೆ ಮಾವ ಗಂಡ ದೈಹಿಕ ಕಿರುಕುಳ ಕೊಡ್ತಿದ್ರೆ ಸೀದಾ ಅಲ್ಲಿಗೆ ಹೋಗಬಹುದು. ಅವರು ಸಮಾಲೋಚನೆ ಮಾಡ್ತಾರೆ, ಪೊಲೀಸ್ ಮತ್ತು ಕಾನೂನು ನೆರವು ಉಚಿತವಾಗಿ ಕೊಡ್ತಾರೆ. ತಾತ್ಕಾಲಿಕವಾಗಿ ಎಲ್ಲಾದರೂ ಇದಕ್ಕೆ ಮಹಿಳೆಗೆ ವ್ಯವಸ್ಥೆ ಮಾಡಿಕೊಡ್ತಾರೆ, ಮನೆಯಿಂದ ಹೆಂಗಸನ್ನ ಹೊರಗೆ ಹಾಕಿದ್ರೆ, ಅವಳಿಗೆ ಯಾವುದಾದರೂ ವೃತ್ತಿಯಲ್ಲಿ ತರಬೇತಿ ಕೊಟ್ಟು ಮುಂದೆ ಕೆಲಸ ಮಾಡಕ್ಕೆ ನೆರವಾಗ್ತಾರೆ. ತೀರಾ ಗಂಭೀರ ಸಂದರ್ಭವಾಗಿದ್ರೆ, ಜಿಲ್ಲಾ ಸಮಿತಿಯಿಂದ ಶಿಫಾರಸ್ಸು ತಗೊಂಡು ಹಣ ಸಹಾಯ ಕೂಡ ಕೊಡುತಾರೆ.

ಹೆಂಡತಿ : ಹೌದೇನ್ರೀ ? ಮತ್ತೆ ಸರಸ್ವತಿಗೆ ಹೇಳಬೇಕಲ್ಲಾ ಇದನ್ನ ? ಆದ್ರೆ ಅವಳನ್ನ ಅಲ್ಲಿ ಹಾಗೇ ಚಚ್ಚಿ ಹಾಕಿದ್ದಾರೆ... ರೀ...

ಗಂಡ : ಏನೇ... ?

ಹೆಂಡತಿ : ನಾವೇ ಫೋನ್ ಮಾಡಿಬಿಡೋಣಾರೀ ಇಂಗಿಂಗೆ, ಅವಳಿಗೆ ತುಂಬಾ ಕಿರುಕುಳ ಕೊಡ್ತಾ ಇದ್ದಾರೆ, ಇಲ್ಲೇ ಇದ್ರೆ ಅವಳ್ನ ಸಾಯಿಸಿಬಿಡುತ್ತಾರೆ, ಬಂದು ಪಾರು ಮಾಡಿ ಅಂತ ಪೊಲೀಸ್‌ರಿಗೆ ಫೋನ್ ಮಾಡಿದ್ರೆ ?

ಗಂಡ : ನಿಂಗೆ ಮಾಡಬೇಕು ಅನ್ನಿಸಿದರೆ ಮಾಡು.

ಹೆಂಡತಿ : ಖಂಡಿತಾ ಅನ್ನಿಸಿದೆ. ಹೆಂಗಸರಿಗೆ ಹೆಂಗಸರು ನೆರವಾಗಬೇಕು.

ಗಂಡ : (ನಗುತ್ತಾ) ಗಂಡರು ನೆರವಾಗಬಾರದಾ ?

ಹೆಂಡತಿ : ನೀವೂ ನೆರವಾಗಿ, ಯಾರು ಬೇಡಾ ಅಂದ್ರು ಬನ್ನಿ ಪೊಲೀಸ್‌ಗೆ ಹೇಳಿ ಬರೋಣಾ.

ಗಂಡ : ಪೊಲೀಸ್‌ಗೆ ಹೇಳಕ್ಕೆ ಮೊದ್ಲು ನಿಮ್ ಗುಂಪಿನಲ್ಲಿ ಹೇಳೇ. ಎಲ್ಲಾ ಸೇರಿ ಒಗ್ಗಟ್ಟಲ್ಲಿ ಹೋರಾಟಿದ್ರೇನೇ ಫಲ ಸಿಗೋದು. ಇಲ್ದಿದ್ರೆ ಒಂಟಿ ಹೆಂಗಸು ಅಂತ ಅವರು ಇನ್ನೂ ಸತಾಯಿಸಬಹುದು.

ಹೆಂಡತಿ : ಹೌದೂರಿ ! ನೋಡುದ್ರಾ ! ನೀವೂ ಪರವಾಗಿಲ್ಲ ನಾಳೇನೇ ಹೋಗಿ ಗುಂಪಿನಲ್ಲಿ ಹೇಳ್ತೀನಿ.

## ದೃಶ್ಯ - ಆರು

(ಸ್ವಸಹಾಯ ಗುಂಪಿನ ಸದಸ್ಯರೆಲ್ಲರೂ ಸೇರಿ ಸರಸ್ವತಿ ಮನೆ ಹತ್ತಿರ ಬರುತ್ತಾರೆ)

ಮಹಿಳೆ 1 : ಅಣ್ಣಾ ಗರುಪ್ಪಣ್ಣಾ, ಇದೀಯಾ ಮನೇಲಿ ? ವಸಿ ಬಾ ಇತ್ತ.

ಮಹಿಳೆ 2 : ಏನವ್ವಾಗಿರಿಜವ್ವಾ ? ಇದ್ದೀಯಾ ? (ಒಳಗಿನಿಂದ ಮಾವ ಬಗ್ಗಿ ನೋಡುತ್ತಾನೆ. ಹೆಂಗಸರ ಗುಂಪು ನೋಡಿ ದಂಗಾಗುತ್ತಾನೆ.)

ಮಹಿಳೆ 4 : ಬಾಣ್ಣಾ ಬಾ, ವಸಿಹೊರಗಡೆ ಬಾ.

(ಮಾವ ಹೆದರುತ್ತಾ ಹೊರಗೆ ಬರುತ್ತಾನೆ)

ಮಾವ : ಏ... ಏ... ಏನು ? ಯಾಕೆ ಎಲ್ಲರೂ ಬಂದಿದ್ದಿರಿ ?

ಮಹಿಳೆ 1 : ಅಯ್ಯೋ.... ಮನಿಗೆ ಯಾರಾದ್ರೂ ಬಂದ್ರೆ ಹಿಂಗೆ ಯಾಕ್ ಬಂದ್ರಿ ಅಂತಾರಾ ? ಸುಮ್ನೆ ಬಂದ್ವಿ, ನಿಮ್ ಯೋಗಕ್ಷೇಮ ವಿಚಾರಿಸಿಕೊಂಡು ಓಗಾನಾ ಅಂತ. ಎಲ್ಲ ಚೆಂದಾಗಿದ್ದೀರಾ ?

ಮಾವ : ಹೂ... ಹೂಂ (ಅನುಮಾನಿಸುತ್ತ)

ಮಹಿಳೆ 2 : ಎಲ್ಲಿ ನಿಮ್ ಹೆಣ್ತಿ ಕಾಣ್ತಾನೇ ಇಲ್ಲ ?

ಮಾವ : ಒಳಗವಳೆ.

ಮಹಿಳೆ 3 : ಕರೀರಿ ಮತ್ತೆ ಅವ್ರನ್ನೂ ನೋಡ್ಕಂಡ್ ಓಗಾನಾ ಮತ್ತೆ

ಮಾವ : ಯಾ...ಯಾಕೆ ?

ಮಹಿಳೆ 1 : ಅಯ್ಯೋ, ಇನ್ನೇನಕ್ಕೆ, ಸುಮ್ನೆ ನೋಡ್ಕಂಡ್ ಹೋಗಾಕ್ಕೆ ಬಂದ್ವಿ, ಗಿರಿಜವ್ವಾ ಅದೀಯೇನವ್ವಾ ಮನೆಯಾಗೆ ?

(ಕಿಟಕಿಯಿಂದ ಅತ್ತೆ ಇಣುಕಿ ನೋಡಿ ಹೆದರುತ್ತಾಳೆ)

ಮಹಿಳೆ 2 : ಬಾ ಬಾ ಹೊರಗೆ ಬಾ, ನಂಟ್ರು ಬಂದಿದ್ದೀವಿ, ಮಾತಾಡ್ಸು ಬಾ

(ಅತ್ತೆ ಹೊರಗೆ ಬರುತ್ತಾಳೆ, ಅನುಮಾನಿಸುತ್ತಾಳೆ)

ಮಹಿಳೆ 2 : ಏನವ್ವಾ, ಗಿರಿಜವ್ವಾ ಹೆಂಗವನ ನಿನ್ ಮಗಾ, ನಿನ್ ಸೊಸೆ ಎಂಗವಳೆ ?

(ಗಿರಿಜವ್ವಾ ಅನುಮಾನಿಸುತ್ತಾಳೆ)

ಮಹಿಳೆ 4 : ಮನೇಲಿ ಎಲ್ರೂ ಚೆಂದಾಗವರಾ ಅಂತ ಕೇಳ್ತಾ ಅವ್ರೆ.

ಗಿರಿಜವ್ವ : ಹೂಂ.

ಮಹಿಳೆ 1 : ಎಲ್ಲಿನಿನ್ ಸೊಸೆ ಕಾಣ್ತಾನೇ ಇಲ್ಲ ? ತವರು ಮನೇಗೆ ಹೋಗವ್ಳಾ ?

ಗಿರಿಜವ್ವ : ಇಲ್ಲ...ಹುಂ... ಇಲ್ಲ...

ಮಹಿಳೆ 2 : ಇದೇನ್ ಗಿರಿಜವ್ವ ಹೂಂ ಅಂತೀಯಾ ಇಲ್ಲ ಅಂತೀಯಾ....? ಇದಾಳೋ ಇಲ್ವೋ ?

(ಅಷ್ಟರಲ್ಲಿ ಒಳಗಿನಿಂದ ಸರಸೂ ಜೋರಾಗಿ ಕಿರುಚುತ್ತಾಳೆ)

ಗಿರಿಜವ್ವ : ಇದ್ದಾಳೆ.

ಮಹಿಳೆ 2 : ವಸಿ ಕರಿ ಅವುಳನ್ನ ಹೊರಗೆ.

ಮಾವ : ಯಾಕ್ರೀ ಕರೀಬೇಕು ? ನೀವ್ಯಾರು ಅವಳನ್ನ ಹೊರಗೆ ಕರಿಯಕ್ಕೆ ? ಹೋಗಿ ಎಲ್ಲರೂ ಇಲ್ಲಿಂದ.

ಮಹಿಳೆ 1 : (ಸ್ವಲ್ಪ ಗಟ್ಟಿಯಾಗಿ) ನಮ್ಮನ್ನ ಹೋಗಿ ಅನ್ನಕ್ಕೆ ನಿಂಗೇ ಹಕ್ಕಿಲ್ಲ. ನಾವು ನಿನ್ ಮನೆ ಒಳಗೆ ಬಂದಿಲ್ಲ. ಮೊದ್ಲುನಿನ್ ಸೊಸೇನಾ ಹೊರಗೆ ಕರೀರಿ ಆಮೇಲೆ ನಾವು ಇಲ್ಲಿಂದ ಹೋಗೋದು.

ಮಾವ : ಯಾಕೆ ಕರೀಬೇಕು ?

ಮಹಿಳೆ 2 : ನೀವು ನಿಮ್ ಸೊಸೆಗೆ ಕಿರುಕುಳ ಕೊಡ್ತಾ ಇದ್ದೀರಿ ಅಂತ ಗೊತ್ತಾಗಿದೆ.

ಮಾವ : ಯಾರ ಹೇಳಿದ್ದು ? ಎಲ್ಲ ಸುಳ್ಳು.

ಮಹಿಳೆ 1 : ಸುಳ್ಳಾದ್ರೆ ತುಂಬಾ ಸಂತೋಷ ಹೊರಟು ಹೋಗ್ತೀವಿ. ಆದರೆ ಅದನ್ನ ನಿನ್ ಸೊಸೆ ಬಾಯಲ್ಲೇ ಕೇಳಿಕೊಂಡು ಹೋಗ್ತೀವಿ ಕರೀರಿ ಅವಳ್ನ ಹೊರಗೆ.

ಮಹಿಳೆ 3 : ಸರಸ್ವತೀ ವಸಿ ಹೊರಗೆ ಬಾವ್ವ

(ಸರಸ್ವತಿ ತಡವರಿಸುತ್ತ ಹೊರಗೆ ಬರುತ್ತಾಳೆ ಅಳುತ್ತಿದ್ದ ಚಿಹ್ನೆ ಕೈ ಕೆಂಪಾಗಿದೆ.)

ಮಹಿಳೆ 1 : ಏನವ್ವಾ ಸರಸ್ವತಿ, ಕೈಗೇನಾಯ್ತು ?

ಸರಸ್ವತಿ : (ಬಿಕ್ಕಳಿಸುತ್ತಾಳೆ)

ಮಹಿಳೆ 2 : ನೋಡೂ, ನಾವು ನಿನಗೆ ಸಹಾಯ ಮಾಡಕ್ಕೆ ಬಂದಿದ್ದೀವಿ. ಹೆಣ್ಣು ಮಕ್ಕಳಿಗೆ ಕಿರುಕುಳ ಕೊಡೋದು ಕಾನೂನು ಪ್ರಕಾರ ಅಪರಾಧ, ಇದಕ್ಕೆ ಅತ್ತೆ ಮಾವ ಗಂಡ ಎಲ್ಲರಿಗೂ ಜೈಲಾಗುತ್ತೆ. ನಿನ್ನನ್ನ ಅತ್ತೆ ಮನೆಯೋರು ಚೆನ್ನಾಗಿ ನೋಡಿಕೋತಿದ್ದಾರಾ ಇಲ್ಲಾ ಕಿರುಕುಳ ಕೊಡ್ತೀದ್ದಾರಾ ಹೇಳು, ಕೈಗೇನಾಯ್ತು ?

ಸರಸ್ವತಿ : (ಬಿಕ್ಕಳಿಸುತ್ತ) ಅದೂ... ಅದೂ...

ಮಹಿಳೆ 3 : ಹೇಳು, ಧೈರ್ಯವಾಗಿ ಹೇಳು ನಾವೆಲ್ಲ ನಿಂಗೆ ನೆರವಾಗಕ್ಕೆ ಬಂದಿದ್ದೀವಿ.

ಸರಸ್ವತಿ : ನನ್ನ ನಡತೆ ಚೆನ್ನಾಗಿಲ್ಲ ಅಂತ.... ಅನುಮಾನ ಪಟ್ಟುಕೊಂಡು, ನೀನು ಶುದ್ಧ ಆಗಿದ್ರೆ ನಿನ್ ಕೈ ಸುಡಲ್ಲ ಅಂತ ಕೈ ಮೇಲೆ ಕರ್ಪೂರ ಇಟ್ಟು ಬುಟ್ಟು ಸುಡ್ತಿದ್ರು.

ಮಹಿಳೆಯರು : ಹಾಂ ! ಎಲಾ ರಾಕ್ಷಸರಾ ! ನೋಡಿದ್ರಾ ! ಎಂತಾ ಜನ ! ಖದೀಮರು !

(ಅಷ್ಟರಲ್ಲಿ ಪೊಲೀಸ್ ಒಬ್ಬ ಅಲ್ಲಿಗೆ ಬರುತ್ತಾನೆ)

ಪೊಲೀಸ್ : ಇಲ್ಲಿ ರಮೇಶೇ ಅಂದ್ರೆ ಯಾರ್‍ರೀ ?

ಮಾವ : ಯಾ...ಯಾಕೆ ?

ಪೊಲೀಸ್ : ಯಾಕೆ ಅಂದ್ರೆ ? ಅವರ ಮೇಲೆ ವಾರಂಟ್ ಇದೆ. ಕರೀರಿ ಅವರನ್ನ

(ಅಷ್ಟರಲಿ ಗುರಪ್ಪ, ರಮೇಶ ಹೊರಗೆ ಬರುತ್ತಾರೆ)

ಮಹಿಳೆ 1 : ಅವನೇ ರಮೇಶ

(ಪೊಲೀಸ್ ತಕ್ಷಣ ಅವನನ್ನು ಹಿಡಿದುಕೊಳ್ಳುತ್ತಾನೆ)

ಮಾವ : ಏನ್ ಮಾಡ್ದ ಅವನು ?

ಪೊಲೀಸ್ : ಏನ್ ಮಾಡ್ದನಾ ? ಪಟ್ನದಲ್ಲಿ ಕಾಲೇಜ್ ಹುಡುಗಿ ಮೇಲೆ ಅತ್ಯಾಚಾರ ಮಾಡಿ ಓಡಿ ಬಂದಿದ್ದಾನೆ. ಅವನ ಮೇಲೆ ಕಂಪ್ಲೇಟ್ ಆಗಿದೆ. ನಡಿಯೋ ರ್‍ಯಾಸ್ಕಲ್.

(ಅವರು ಹೋದ ಮೇಲೆ ಮಹಿಳೆಯರು ಜೋರಾಗಿ)

ಮಹಿಳೆ 1 : ಏನಣ್ಣಾ ಗುರಣ್ಣಾ, ಹೆಣ್ತೆ ಮೇಲೆ ಅನುಮಾನ ಪುಟ್ಟ ಕೈ ಮೇಲೇ ಕರ್ಪೂರ ಇಟ್ಟು ಸುಡ್ತಿದ್ಯಲ್ಲ ಈಗೇನ್ ಹೇಳ್ತೀಯಾ ?

**ಮಹಿಳೆ 2** : ನೋಡಪ್ಪಾ ತಮ್ಮಣ್ಣಾ, ನಿನಗೆ ನಿನ್ ಸೊಸೆ ಭಾರ ಆಗಿದ್ರೆ ಹೇಳು, ಅವಳನ್ನ ಸಾಂತ್ವನ ಕೇಂದ್ರಕ್ಕೆ ಸೇರಿಸ್ತೀನಿ, ಅಂತಾ ಹೆಣ್ಣು ಮಕ್ಕಳಿಗೇ ಅಂತ ಸ್ತ್ರೀ ಶಕ್ತಿ ಯೋಜನೆ ಇದೆ. ಅವಳೂ ಏನಾದ್ರೂ ತರಬೇತಿ ಮಾಡ್ಕೊಂಡು ಅವಳ ಕಾಲ ಮೇಲೆ ಅವಳು ನಿಂತುಕೋತಾಳೆ. ಹೆಣ್ಣು ಮಕ್ಕಳಿಗೆ ಈಗ ಯಾರು ದಿಕ್ಕಿಲ್ಲ ಅಂತ ತಿಳಿಕೋಬೇಡಾ ಗೊತ್ತಾಯ್ತು ? ಪೊಲೀಸರಿಗೆ ಒಂದು ಕಂಪ್ಲೇಂಟ್ ಕೊಟ್ರೆ ಸಾಕು ನೀವೆಲ್ಲ ಜೈಲಿನ ಕಂಬಿ ಎಣಿಸಬೇಕಾಗ್ತದೆ ಕಂಬಿಯಾ !

(ಮಾವ ಅತ್ತೆ ಹೆದರುತ್ತಾರೆ. ಗುರಪ್ಪ ತುಂಬ ಪಶ್ಚಾತ್ತಾಪಡುತ್ತಾನೆ)

**ಮಹಿಳೆ 1** : ಏನಪ್ಪಾ ಗುರಪ್ಪಾ, ನಿನ್ನನ್ನೇ ನಂಬಿ ಬಂದ ಹೆಣ್ಣು ಮಗಳಿಗೆ ಇಂತಾ ಬದುಕಾ ನೀನು ಕೊಡೋದು ? ನಾಳೆ ನಿನ್ನ ಮಗಳಿಗೆ ಅವಳತ್ತೆ ಮನೇಲಿ ಹೀಂಗೆ ಮಾಡಿದ್ರೆ ನೀನು ಸಹಿಸ್ಕೋತೀಯಾ ?

(ಗುರಪ್ಪನಿಗೆ 'ಏಟು' ತಗುಲುತ್ತದೆ)

**ಮಹಿಳೆ 2** : ಅವರು ಮಾತ್ರ ಹೆಣ್ಣು ಮಕ್ಕಳು, ನಿನ್ ಹೆಣ್ತಿನೂ ಒಬ್ಬರ ಮನೆ ಹೆಣ್ಣು ಮಗಳಲ್ವಾ ? ಅವಳಿಗೆ ಹಿಂಗೆ ಮಾಡಕ್ಕೆ ನಿಂಗೆ ಮನಸ್ಸಾದ್ರೂ ಹೆಂಗೆ ಬಂತು ?

**ಗುರಪ್ಪ** : ತಪ್ಪಾಯ್ತು, ಇನ್ನು ಮೇಲೆ ಹಂಗೆ ಮಾಡಲ್ಲ.

**ಮಹಿಳೆ 1** : ನಿಮ್ಮಪ್ಪ ಅಮ್ಮ ?

**ಅತ್ತೆ-ಮಾವ** : ನಾವೂ ಪ್ರಮಾಣ ಮಾಡ್ತೀವಿ.

**ಮಹಿಳೆ 2** : ಹಂಗಲ್ಲ, ದೇವರ ಸಾಕ್ಷಿಯಾಗಿ ಪ್ರಮಾಣ ಮಾಡಿ.

(ಪ್ರೇಕ್ಷಕರತ್ತ ತಿರುಗಿ, ಎಲ್ಲರನ್ನೂ ಒಳಗೊಂಡು ಪ್ರಮಾಣ ವಚನ ಸ್ವೀಕಾರ ಮಾಡಿಸುತ್ತಾಳೆ. ನಾಟಕದ ಪಾತ್ರಧಾರಿಗಳು ಪ್ರಮಾಣ ಮಾಡುತ್ತಾರೆ.)

"ನಾವು ನಮ್ಮ ಮನೆ ಹೆಣ್ಣು ಮಕ್ಕಳನ್ನು ಮತ್ತು ಸೊಸೆಯರನ್ನು ಚೆನ್ನಾಗಿ ನೋಡಿಕೊಳ್ಳುತ್ತೀವಿ. ಅವಳಿಗೆ ಮಾನಸಿಕವಾಗಿ ಆಗಲೀ, ದೈಹಿಕವಾಗಿ ಆಗಲೀ ಹಿಂಸೆ ಕೊಡುವುದಿಲ್ಲ."

☺☺☺ (ಮುಕ್ತಾಯ) ☺☺☺

ಹೆಂಡತಿಗೆ ಹೊಡೆತ
ಗಂಡನಿಗೆ ಶಿಕ್ಷೆ ಖಂಡಿತ
ಕುಟುಂಬದಲ್ಲಿ ಹಿಂಸೆ



(ಚಿತ್ರ - 14)

# ಹೆಣ್ಣು ಸಂಸಾರದ ಕಣ್ಣು

: ಪಾತ್ರವರ್ಗ :

1. ತಾಯಿ
2. ಶಂಕರ
3. ಕಮಲ
4. ತಂದೆ
5. ಗಂಡ
6. ಅತ್ತೆ
7. ಸದಸ್ಯ

# ಹೆಣ್ಣು - ಸಂಸಾರದ ಕಣ್ಣು

(ಲಿಂಗ ತಾರತಮ್ಯ ಕುರಿತ ನಾಟಕ)

(ಹಾಡು)

## ದೃಶ್ಯ - ಒಂದು

(ಹನ್ನೆರಡು ವರ್ಷದ ಕಮಲ ಗೋಡಗೆ ಒರಗಿ ನಿಂತಿದ್ದಾಳೆ.)

ತಾಯಿ : ಕಮಲಾ....ಏ... ಕಮಲಾ (ಧ್ವನಿ ಮಾತ್ರ) ಏ ಎಲ್ಲಿದ್ದಿಯೇ ? ಶಂಕರಂಗೆ ಊಟ ಬಡಿಸು ಅವನಿಗೆ ಶಾಲೆಗೆ ತಡ ಆಗ್ತದೆ.

(ಕಮಲ ಕನಸಿನಿಂದ ಹೊರಗೆ ಬಂದಂತೆ ಎಚ್ಚರಗೊಂಡು ನಿಟ್ಟುಸಿರು ಬಿಡುತ್ತಾಳೆ. ಮೂಲೆಗೆ ಹೋಗಿ ಒಲೆಯ ಮೇಲಿನಿಂದ ಪಾತ್ರೆಯ ಮುಚ್ಚಳ ತೆಗೆದು, ಗೂಡಿನಿಂದ ತಟ್ಟೆ ತೆಗೆದುಕೊಂಡು ಅದರ ತುಂಬ ಊಟ ತುಂಬುತ್ತಾಳೆ. ಮಣೆ ಇಟ್ಟು ತಟ್ಟೆಯನ್ನು ಅದರ ಮುಂದೆ ಇಟ್ಟು, ನೀರಿನ ಲೋಟ ಇಟ್ಟು ನೀರು ತುಂಬುತ್ತಾಳೆ. ಶಂಕರ ಬಂದು ಕೂತು ಊಟ ಮಾಡುತ್ತಾನೆ.)

ಶಂಕರ : ಅನ್ನ ಹಾಕು (ಕಮಲ ಹಾಕುತ್ತಾಳೆ.)

ಶಂಕರ : ಇನ್ನೊಸ್ವಲ್ಪ ಸಾರು ಹಾಕು (ಕಮಲ ಹಾಕುತ್ತಾಳೆ)

ಶಂಕರ : ಏ....ಕಾಯಿ ಹಾಕೇ...ಏನ್ ಬರೀ ನೀರು ಹಾಕ್ತಾ ಇದ್ದೀಯಾ.

(ತಾಯಿ ಕೇಳಿಸಿಕೊಂಡ ಒಳಗಿನಿಂದ ಕೂಗುತ್ತಾಳೆ) : ಏ.... ಸರಿಯಾಗಿ ಬಡಿಸೇ ಕಾಯಿ ಎಲ್ಲ ಅವನಿಗೆ ಹಾಕು ಅದನ್ನೇನು ಉಳಿಸಿರ್ತಿ. ಅವನು ತಿಂದರೆ ಸಾಕು.

(ಕಮಲ ಬಟ್ಟಲಿನ ಎಲ್ಲ ಹೋಳನ್ನೂ ಆರಿಸಿ ಅವನಿಗೆ ಹಾಕುತ್ತಾಳೆ. ಅವನು ಚೆನ್ನಾಗಿ ತಿಂದು ನೀರು ಕುಡಿದು ಡರ‍್ರನ ತೇಗಿ ಕಷ್ಟಪಟ್ಟು ಏಳುತ್ತಾನೆ. ಅವನು ಊಟ ಮಾಡುವುದನ್ನೇ ನೋಡುತ್ತಾ ಕಮಲ ನಿಂತಿದ್ದಾಳೆ ಅವನು ಊಟ ಮಾಡಿ ಅವಳಿಗೆ ಉದ್ದೇಶಿಸಿ)

ಶಂಕರ : ತಟ್ಟೆ ಎತ್ತೇ (ಹೋಗುತ್ತಾನೆ)

(ಕಮಲ ಅವನ ಎಂಜಲು ತಟ್ಟೆ ಎತ್ತಿಕೊಂಡು ಹೋಗುವಾಗ ಅವನು ಕೈ ತೊಳೆದ ನೀರು ಸ್ವಲ್ಪ ಚೆಲ್ಲುತ್ತದೆ ಅಷ್ಟರಲ್ಲಿ ತಾಯಿ ಬರುತ್ತಾಳೆ. ಅವಳು ಚೆಲ್ಲಿದ್ದನ್ನು ನೋಡಿ ತಲೆಗೆ ತೊಟಕುತ್ತಾಳೆ)

ತಾಯಿ : ಏ.... ಮೈ ಮೇಲೆ ಗ್ಯಾನ ಐತಾ ? ಎಂಜಲು ನೀರು ಚೆಲ್‌ಕೊಂಡು ಹೋಗ್ತಾ ಇದ್ದೀಯಾ ?

(ಅವಳು ಹೊರಗೆ ಹೋಗಿ ತಟ್ಟೆ ಇಟ್ಟು ಬರುತ್ತಾಳೆ)

(ಅಷ್ಟರಲ್ಲಿ ಶಂಕರ ಸ್ಕೂಲಿಗೆ ಸಿದ್ಧವಾಗಿ. ಬ್ಯಾಗ್ ಎತ್ತಿಕೊಂಡು ಬರುತ್ತಾನೆ)

ಕಮಲ : (ಅವನ ಸ್ಕೂಲ್ ಬ್ಯಾಗನ್ನೇ ನೋಡುತ್ತಾ) ಏ ಶಂಕರಾ ಸ್ಕೂಲಿನಲ್ಲಿ ಏನು ಹೇಳಿಕೊಟ್ರೋ ?

ಶಂಕರ : ಅದೆಲ್ಲ ನಿಂಗೆಲ್ಲಿ ಗೊತ್ತಾಗುತ್ತೆ ಗೂಬೆ (ಹೋಗುತ್ತಾನೆ).

(ಕಮಲ ಅವನನ್ನೇ ನೋಡಿ ನಂತರ ಇನ್ನೊಂದು ತಟ್ಟೆ ಎತ್ತಿಕೊಂಡು ಬಂದು ಪಾತ್ರೆ ಮುಚ್ಚಳ ತೆಗೀತಾಳೆ. ಅನ್ನ ಆಗಿ ಹೋಗಿದೆ. ಸಾರು ತಳಕಂಡಿದೆ. ಒಂದೂ ಹೋಳು ಇಲ್ಲ)

ಕಮಲ : ಅವ್ವಾ... ಅವ್ವಾ... ಶಂಕ್ರ ಎಲ್ಲಾ ತಿಂದ್ ಹಾಕ್‌ಬಿಟ್ಟನಂಗೆ ಅನ್ನಾನೂ ಇಲ್ಲ, ಈಗೇನ್ ತಿನ್ಲಿ ನಾನು ?

ತಾಯಿ : ಥೂ ಶನಿ, ಹಂಗೆ ಕೂಗ್ ಹಾಕಬೇಡ. ಬೆಳಿಯೋ ಹುಡುಗ ತಿನದೇ ಏನು ಮಾಡ್ತಾನೆ ? ನಿಂಗೆ ನಿನ್ನೆ ರಾತ್ರಿದು ತಂಗಳನ್ನ ಐತೆ ತಿನ್ನು.

(ಕಮಲ ಇನ್ನೊಂದು ಪಾತ್ರೆಯಿಂದ ತಂಗಳನ್ನು ಹಾಕಿಕೊಂಡು ಊಟ ಸ್ವಲ್ಪ ಸಾರು ಸುರಿದುಕೊಂಡು ಗಟ್ಟಿಯಾಗಿ ತಿನ್ನಲು ಪ್ರಾರಂಭಿಸುತ್ತಾಳೆ.)

## ದೃಶ್ಯ - ಎರಡು

(ಕಮಲ ಕಸ ಗುಡಿಸುತ್ತಿದ್ದಾಳೆ. ತಾಯಿ ಬೇರೆ ಏನೋ ಕೆಲಸ ಮಾಡುತ್ತಿದ್ದಾಳೆ. ಕಮಲ ಶಂಕರನ ಸ್ಕೂಲಿನ ಪುಸ್ತಕ ಎತ್ತಿಕೊಂಡು ತಿರುವಿ ಹಾಕುತ್ತಾಳೆ. ತಾಯಿ ದಢಾರನೆ ಅವಳ ಬೆನ್ನಿಗೆ ಗುದ್ದಿ ಪುಸ್ತಕ ಕಿತ್ತುಕೊಂಡು ಚೀಲದಲ್ಲಿಟ್ಟು ಮೇಲಿಡುತ್ತಾಳೆ.)

ತಾಯಿ : ಅವನ ಶಾಲೆ ಪುಸ್ತಕ ಮುಟ್ಟಬೇಡಾ ಅಂತ ಎಷ್ಟು ಸಲ ಹೇಳಿದ್ದೀನಿ. ಎಲ್ಲಕೊಳೆ ಮಾಡಿ ಇಡ್ತೀಯಾ. ನಿಂಗ್ಯಾಕೆ ಈ ಶಾಲೆ ಪುಸ್ತಕದ ಸಹವಾಸ ? ನಿನ್ ಪಾಡಿಗೆ ನಿನ್ ಕೆಲ್ಸ ನೋಡ್ಕಂಡ್ ಬಿದ್ದಿರು. ಇನ್ನೊಂದ್ ಸಲ ಮುಟ್ಟಿದ್ರೆ ನೋಡು.

(ಕಮಲ ಬೆಚ್ಚಿ ಬಿದ್ದು ಹಿಂದೆಕ್ಕೆ ಹಾರಿ ತಾಯಿಯನ್ನೇ ನೋಡುತ್ತಿದ್ದಾಳೆ.)

ಕಮಲ : ಅವ್ವಾ, ನಾನು ಇಸ್ಕೂಲಿಗೆ ಹೋಗಬೇಕು. ನಾನೂ ಓದಿ ದೊಡ್ಡೋಳಾಗಿ ಆ ಆಸ್ಪತ್ರೆ ಡಾಕ್ಟರ ನಾನು ಡಾಕ್ಟರಾಗಬೇಕು.

ತಾಯಿ : ಏ...... ತಗೀ ಹುಚ್ಚು. ನಿನಗ್ಯಾಕೆ ಆ ಸುದ್ದಿ. ಡಾಕ್ಟರಗ್ತಾಳಂತೆ ಡಾಕುಟ್ರು ಹ್ಹ..ಹ್ಹ...ಹ್ಹ... (ನಗುತ್ತಾಳೆ).

(ಕಮಲ ಸುಮ್ಮನೆ ನೋಡುತ್ತಾಳೆ)

ತಾಯಿ : ಅಲ್ವೇ, ಈಗ್ಲೆ ನಿಂಗೆ ಹದಿನಾಲ್ಕು ತುಂಬ್ತು. ನಾಳೆ ಯಾರೋ ಬರ್‍ತಾನೆ. ಮದುವೆ ಮಾಡಕೋತಾನೆ ಸೀದಾ ಆ ಮನೆ ಅಡಿಗೆ ಮನೆಗೆ ಹೋಗಿ ಅಡಿಗೆ ಮಾಡಬೇಕು. ನಿನಗ್ಯಾಕೆ ಈ ಓದು ಬರಹಾವೆಲ್ಲ ?

ಕಮಲ : ಅವ್ವಾ, ನಂಗೆ ಹದಿನೆಂಟು ತುಂಬೋವರ್ಗೂ ಮದುವೆ ಮಾಡೋ ಹಂಗಿಲ್ಲ. ಹಂಗಂತ ಆ ಸಂಘದ ಮೇಡಂ ಹೇಳ್ತಾ ಇದ್ರು. ನಾನು ಹದಿನೆಂಟು ಆದ ಮೇಲೆ ಮದುವೆ ಮಾಡ್ಕೋತೀನಿ.

ತಾಯಿ : ಹುಚ್ಚಿ, ನಿನ್ನನ್ನು ಕೇಳಿ ಯಾರು ಮಾಡ್ತಾರೆ ? ನಿಮ್ಮಪ್ಪ ತಂದ ಗಂಡನ ಹತ್ರ ತಾಳಿ ಕಟ್ಟಿಸ್ಕೋ ಬೇಕು ಅಷ್ಟೇ.

ಕಮಲ : ನಂಗೆ ಅವನು ಇಷ್ಟ ಇಲ್ದಿದ್ರೆ ?

ತಾಯಿ : ಇಷ್ಟೇ ? ಇಷ್ಟನಿಷ್ಟಯಾರು ಕೇಳಿದ್ರು ? ನೀನೇನು ರಾಜಕುಮಾರಿನ ಸ್ವಯಂವರ ಮಾಡಿಕೊಳ್ಳಕ್ಕೆ ? ಬಂದೋನು ನಿನ್ನನ್ನು ಒಪ್ಪಿಕೊಂಡ್ರೆ ಅದೇ ನಿನ್ ಅದೃಷ್ಟ ಹೋಗ್ ಹೋಗು... ನನ್ನನ್ನೇನು ಕೇಳಿಮಾಡಿ ಮದುವೆ ಮಾಡಿದ್ರೇನು ?

ಕಮಲ : ನೀನೂ ನಿಮ್ಮಪ್ಪಂಗೆ ಹೇಳಬೇಕಿತ್ತು.

ತಾಯಿ : ಹೋಗೇ ಹುಚ್ಚಿ, ಏನೋ ಎರಡಕ್ಷರ ಓದಕ್ಕೆ ಕಲಿತೆ ಅಂದು ಬಿಟ್ಟು ಈ ಪಾಟಿ ಮಾತಾಡಬೇಡಾ. ಹದಿನೆಂಟು ವರ್ಷ ಆದ ಮೇಲೆ ನಿನ್ನನ್ನು ಮಾಡ್ಕೋತಾರೆ ? ಮದುವೆ ಹುಡುಗೀನಾ ಮನೇಲಿ ಇಟ್ಟುಕೊಳ್ಳೋರು ಯಾರು ? ಸುಮ್ಕೆಲ್ಸಮಾಡು ಹೋಗು.

## ದೃಶ್ಯ – ಮೂರು

(ಕಮಲ ಹಾಸಿಗೆಯಲ್ಲಿ ನರಳುತ್ತಾ ಮಲಗಿದ್ದಾಳೆ ತಾಯಿ ಬಂದು ನೋಡುತ್ತಾಳೆ.)

ತಾಯಿ : ಏ ಕಮಲೀ.... ಇಷ್ಟು ಹೊತ್ತಾದ್ರೂ ಇನ್ನೂ ಮಲಕ್ಕಂಡಿದ್ದೀಯಲ್ಲೇ !

ಕಮಲ : ಜ್ವರ ಬಂದೈತೆ ಅನ್ನಿಸ್ತದೆ. ತಲೆ ನೋವು ಬಾಯೆಲ್ಲ ಕಹಿ.

ತಾಯಿ : ಸ್ವಲ್ಪ ತುಳಿಸಿ ಕಷಾಯ ಮಾಡಿಕೊಡ್ತಿನಿ ಕುಡಿ. ಕುಡಿದು ಮಲಕ್ಕೋ ನಾನ್ ಹೊಲಕ್ಕೇ ಹೋಗಿ ಬರ್‍ತೀನಿ. ಹಾಂ. ಕಮಲೀ ಮಲಕ್ಕೋಳಕ್ಕೇ ಮೊದ್ಲು ಅಡಿಗೆ ಮನೆ ಕಸ ಗುಡಿಸಿಬಿಟ್ಟುನೀರು ತುಂಬಿಸಿಟ್ಟು ಆಮೇಲೆ ಮಲಕ್ಕೋ ಗೊತ್ತಾಯ್ತೇನು ?

## ದೃಶ್ಯ - ನಾಲ್ಕು

(ಕಮಲ ಕೆಲಸ ಮಾಡುತ್ತಿದ್ದಾಳೆ. ಶಂಕರ ಬರುತ್ತಾನೆ. ಕೆಮ್ಮುತ್ತಾನೆ. ತಾಯಿ ಅಡಿಗೆ ಮನೆಯಿಂದ ಧಾವಿಸಿ ಬಂದು.)

ತಾಯಿ : ಅಯ್ಯೋ ಶಂಕ್ರಾ, ಯಾಕೋ ಕೆಮ್ಮು ಇದ್ದಿಯಾ ? ರೀ ನೋಡ್ರೀ ಶಂಕ್ರ ಕೆಮ್ತಾ ಇದ್ದಾನೆ. ಬೇಗ ಬನ್ರಿ. ಜ್ವರ ಐತಾ ನೋಡಿ ಬನ್ನಿ. ಬಾಪ್ಪ ಬಾಕಂದ ಕೂತ್ಕೋ ಬಾ ಅಪ್ಪ ಡಾಕುಟ್ರ ಹತ್ರ ಕರ್ಕೊಂಡು ಓಗ್ತಾರೆ. ಕುಡಿಯಕ್ಕೆ ಏನಾದ್ರೂ ಕೊಡ್ಲಾ ?

ತಂದೆ : (ಬಂದು ಹಾಗೆ ಮುಟ್ಟಿನೋಡಿ) ಅಯ್ಯೋ ಜ್ವರ ಸುಡುತಾ ಇದೆ. ಬಾ, ತಕ್ಷಣ ಡಕ್ಟ ಹತ್ರ ಔಷಧಿ ತರಾನಾ. (ಇಬ್ಬರೂ ಹೋಗುತ್ತಾರೆ. ಕಮಲ ನೋಡುತ್ತಿದ್ದಾಳೆ).

ಕಮಲ : ಅವ್ವಾ.... ನೀನು ಅವನಿಗೆ ಯಾಕೆ ತುಳಸಿ ಕಷಾಯ ಮಾಡಿಕುಡಿಸಲಿಲ್ಲ.

ತಾಯಿ : ಸುಮ್ನಿರೆ ಶನಿ.... ನಿನ್ನಿಂದಾನೇ ಅವನಿಗೆ ಜ್ವರ ಬಂದಿದ್ದು. (ಕಮಲ ನೋಡುತ್ತಾ ನಿಲ್ಲುತ್ತಾಳೆ)

## ದೃಶ್ಯ - ಐದು

(ಕಮಲನಿಗೆ ಅವ್ವ ತಲೆ ಬಾಚುತ್ತಿದ್ದಾಳೆ. ಕಮಲ ಅಳುತ್ತಿದ್ದಾಳೆ)

ಕಮಲ : ಅವ್ವಾ ನಂಗೆ ಈಗಲೇ ಬೇಡಾ. ನಂಗೆ ಹದಿನೆಂಟು ಆಗೋ ಮೊದಲು ಮದುವೆ ಮಾಡಬಾರದಂತೆ ಗುಂಪಿನ ಮೇಡಂ ಹೇಳಿದ್ದಾರೆ.

ತಾಯಿ : ಸರಿ, ಸರಿ, ಅವರಿಗೆ ಮಾಡಕ್ಕೆ ಬೇರೆ ಕೆಲಸ ಇಲ್ಲ ಅಂದ್ರೆ, ನಿಂಗೂ ಇಲ್ವಾ ? ಈಗ ಗಂಡು ಬಂದಿರೋವಾಗ ಮಾಡಿ ಕಳಿಸೋ ಬದ್ಲು ನಿನ್ನನ್ನು ಕೈಲಿ ಯಾರು ಇಟ್ಟುಕೋತಾರೆ ? ಹೆಣ್ಣು ಮಕ್ಕಳನ್ನು ಬೇಗ ಖರ್ಚು ಮಾಡಬೇಕು.

## ದೃಶ್ಯ - ಆರು

ಕಮಲನ ಮದುವೆ. ಅವಾಗಾ ಏನೂ ಮಾತಾಡದೆ ಪ್ರತಿಕ್ರಿಸದೇ ಕಲ್ಲಿನಂತೆ ಇರುತ್ತಾಳೆ. ಗಂಡನ ಮನೆಗೆ ಕಳಿಸುತ್ತಾರೆ.

## ದೃಶ್ಯ - ಏಳು

ಕಮಲಳ ಗಂಡ ಬಂದು ಊಟಕ್ಕೆ ಕೂರುತ್ತಾನೆ. ಮಣೆ ಮುಂದೆ ತಟ್ಟೆ ನೀರಿನ ಲೋಟ ಇಟ್ಟು ಕಮಲಾ ಬಡಿಸುತ್ತಾಳೆ. ಅವನು ತುತ್ತುಕಲಿಸಿ ಬಾಯಿಗಿಟ್ಟು ಕೋಪದಿಂದ ಅವಳನ್ನು ನೋಡುತ್ತಾನೆ.

ಗಂಡ : ಇದೇನು ಇದು ? ಇದೇನು ಊಟಾನಾ ? ಉಪ್ಪು ಮುದ್ದೆ ನೀನೇ ತಿನ್ನು ಇದ್ನ ; ಏನಿದು ?

ಕಮಲ : (ತಣ್ಣಗೆ) ಊಟ.

ಗಂಡ : ಎದುರುತ್ತರ ಕೊಡ್ತೀಯೇನೇ ? (ಎದ್ದು ತಟ್ಟೆ ಎಸೀತಾನೆ. ಹೊಡೆಯುತ್ತಾನೆ, ಕಮಲ, ಬೀಳುತ್ತಾಳೆ.)

### ದೃಶ್ಯ - ಎಂಟು

(ಕಮಲ ಬಸಿರಿಯಾಗಿದ್ದಾಳೆ.)

ಅತ್ತೆ : ಏನವ್ವ ಕಮಲಾ, ಹೆಣ್ಣು ಹಡೆದು ಬಂದರೆ ಏನ್ ಮಾಡ್ತೀನ್ ನೋಡೂ.

### ದೃಶ್ಯ - ಒಂಬತ್ತು

ಕಮಲ ಮಗುವನ್ನು ಎತ್ತಿಕೊಂಡು ಕೂತಿದ್ದಾಳೆ. ಗಂಡ ಬರುತ್ತಾನೆ. ಅವಳನ್ನು ಮಗುವನ್ನು ಒಂದು ಸಲ ನೋಡಿ ಛೀಟೀರನೇ ಅವಳ ಕೆನ್ನೆಗೆ ಹೊಡೆಯುತ್ತಾನೆ. ಅವಳು ಮಗುವನ್ನು ಎತ್ತಿಕೊಂಡು ಅಳುತ್ತಾಳೆ. ಅವನು ಕೋಪದಲ್ಲಿ ಹೊರಟು ಹೋಗುತ್ತಾನೆ.

### ದೃಶ್ಯ - ಹತ್ತು

(ಕಮಲ ಮತ್ತೆ ಬಸಿರಿ. ನೀರಿನ ಕೊಡ ಹೊತ್ತು ತರುತ್ತಿದ್ದಾಳೆ. ಎದುರಿಗೆ ಸಮಾಜ ಕಾರ್ಯಕರ್ತೆ / ಗುಂಪಿನ ಸದಸ್ಯೆ ಬರುತ್ತಾಳೆ)

ಸದಸ್ಯೆ : ಏನಿದು ಕಮಲಾ ? ಈ ಸ್ಥಿತಿಯಲ್ಲಿ ನೀನು ಇಷ್ಟು ಭಾರ ಹೊರಬಾರದು ಅಂತ ಗೊತ್ತಲ್ವಾ ?

ಕಮಲ : ಹಂಗಾದ್ರೆ ನೀರು ತರೋದು ಯಾರು ?

ಸದಸ್ಯೆ : ಅಲ್ಲಾ ಕಮಲ, ನೀನು ತುಂಬಾ ದುರ್ಬಲವಾಗಿದ್ದೀಯಾ, ನಿನ್ ಮಗಳಿಗೆ ಇನ್ನೂ ಒಂದು ವರ್ಷ ಆಗ್ಲೇ ಪುನಃ ಬಸಿರಾಗಿದ್ದಿಯಾ. ಅಷ್ಟು ಬೇಗನೇ ಯಾಕೆ ಪುನಃ ಬಸಿರಾದೆ ?

ಕಮಲ : ನನಗೆ ಮೊದ್ಲು ಮಗಳು ಹುಟ್ಟಿದ್ಲು. ಅದಕ್ಕೆ ಈ ಸಲ ನಂಗೆ ಸರಿಯಾಗಿ ತಿನ್ನಕ್ಕೂ ಕೊಡ್ತಾ ಇಲ್ಲ. ಈ ಸಲ ಗಂಡು ಹಡೀದಿದ್ರೆ ಏನು ಮಾಡ್ತಾರೋ. (ಕಮಲ ನೀರಸವಾಗಿ ಹೋಗುತ್ತಾಳೆ. ಸದಸ್ಯೆ ಅವಳನ್ನೇ ನೋಡುತ್ತಾಳೆ)

### ದೃಶ್ಯ - ಹನ್ನೊಂದು

(ಕಮಲಿಗೆ ಇನ್ನೊಂದು ಹೆಣ್ಣು. ಎಲ್ಲ ಕಡೆ ಸಾವಿನ ಕಳೆ)

### ದೃಶ್ಯ - ಹನ್ನೆರಡು

(ಕಮಲ ಮತ್ತೆ ಬಸಿರಿ, ಸದಸ್ಯೆ ಮಾತಾಡುತ್ತಾಳೆ)

ಸದಸ್ಯೆ : ಅಲ್ಲ ಆ ಕಮಲ, ಅದ್ಯಾಕೆ ಇಷ್ಟು ಬೇಗ ಮತ್ತೆ ಬಸಿರಿ ಆದೆ. ನನಗೆ ಇಬ್ಬರು ಹೆಣ್ಣು ಮಕ್ಕಳು. ಇಬ್ಬರ ನಡುವೆ ನಾಲ್ಕು ವರ್ಷ ಅಂತರ ಇದೆ. ಮೂರನೇ ಸಲ ನನಗೆ ಗರ್ಭ ನಿಂತಾಗ ನೀನು ಇಳಿಸಿಕೊಂಡು ಬಿಟ್ಬೆ. ನನ್ನ ಗಂಡಾನೂ ಅದಕ್ಕೆ ಒಪ್ಕೊಂಡ್ರು. ಒಬ್ಬ ಮಗಳನ್ನು ಡಾಕ್ಟ್ರು ಇನ್ನೊಬ್ಬಳು ಲಾಯರ್ ಮಡ್ತಾರಂತೆ.

## ದೃಶ್ಯ - ಹದಿಮೂರು

ಕಮಲ : ಏನ್ರೀ, ನಂಗೆ ತುಂಬಾ ಸುಸ್ತಾಗುತ್ತೆ ಮೈಯಲ್ಲಿ ರಕ್ತಾನೇ ಇಲ್ಲ. ಅನ್ಸುತ್ತೆ ಈ ಸಲ ಗರ್ಭ ಇಳಿಸಿಕೊಂಡು ಬಿಟ್ಟು ಎರಡು ವರ್ಷ ಆದ ಮೇಲೆ ನೋಡೋಣ್ವಾ.

ಗಂಡ : ಏನಂದೇ ? ಇಳಿಸಿಕೋತಿಯಾ ? ನೀ ನನ್ನ ಏನೆಂದುಕೊಂಡು ಬಿಟ್ಟಿದ್ದಿಯಾ ? ನನಗೆ ಎಷ್ಟು ಮಕ್ಕಳು ಬೇಕು ಅಂತ ತೀರ್ಮಾನಿಸೋನು ನಾನು. ಗಂಡು ಮಗ ಹೆತ್ತೋವರೆಗೂ ನೀನು ಹಡೀತಾನೇ ಇರಬೇಕು. ಇನ್ನೊಂದು ಹೆಣ್ಣೇನಾದ್ರೂ ಹೆತ್ತೆಯೋ ನೀರಲ್ಲಿ ಮುಳುಗಿಸಿಬಿಡ್ತೀನಿ ಅಷ್ಟೆ.

(ಕಮಲ ಕುಸಿಯುತ್ತಾಳೆ)

## ದೃಶ್ಯ - ಹದಿನಾಲ್ಕು

(ಕಮಲ ಸತ್ತು ಶವವಾಗಿ ಮಲಗಿದ್ದಾಳೆ. ಗಂಡು ಮಗನನ್ನು ಎತ್ತಿಕೊಂಡು ಅವಳ ಗಂಡ ಪಕ್ಕದಲ್ಲಿ ನಿಂತಿದ್ದಾನೆ.)

ಗುಂಪಿನ ಸದಸ್ಯೆ: ಕಮಲನ ಸಾವಿಗೆ ನೀವೇ ಕಾರಣ. ಮೊದಲಿನಿಂದ ಹೆಣ್ಣು ಗಂಡು ಅಂತ ಭೇದ ಮಾಡಿ ಮಾಡೀ ಅವಳಿಗೆ ಸರಿಯಾಗಿ ಊಟ ಕೂಡಾ ಕೊಡಲಿಲ್ಲ. ಕಾಯಿಲೆ ಆದಾಗ ಔಷಧೀನೂ ಕೊಡಲಿಲ್ಲ. ಚಿಕ್ಕ ವಯಸ್ಸಿನಲ್ಲೇ ಕಾನೂನಿಗೆ ವಿರುದ್ಧವಾಗಿ ಮದುವೆ ಮಾಡಿದ್ರಿ. ವರದಕ್ಷಿಣೆ ಅಂತ ಕಿರುಕುಳ ಕೊಟ್ರಿ. ಚಿಕ್ಕವಯಸ್ಸಿನಲ್ಲಿ ಗರ್ಭಿಣಿಯಾಗಿ ಒಂದಾದ ಮೇಲೊಂದು ಮಗಳನ್ನು ಹೆತ್ತರೆ ಹೆಂಗಸಿನ ಆರೋಗ್ಯ ಕೆಡುತ್ತೆ. ಹೆಣ್ಣಾಗಲೀ, ಗಂಡಾಗಲೀ ನಿಮ್ಮದೇ ಮಗು. ನಿಮ್ಮದೇ ರಕ್ತ, ಅದಕ್ಕೆ ಒಳ್ಳೆ ಬದುಕು ಕೊಡುವ ಬದಲಿಗೆ ಗಂಡು ಮಗು ಗಂಡು ಮಗು ಅಂತ ಹಂಬಲಿಸ್ತೀರಿ ತಾಯಿ ಜೀವ ತಕ್ಕೊಂಡ್ರಿ (ಪ್ರೇಕ್ಷಕರನ್ನು ಉದ್ದೇಶಿಸಿ) ಈಗ ಹೇಳ್ರೀ ನಾವು ನಮ್ಮ ಮಗ ಮತ್ತು ಮಗಳನ್ನು ಒಂದೇ ಸಮನಾಗಿ ಕಾಣುತ್ತೇವೆ. ಮಗನಂತೆಯೇ ಮಗಳಿಗೂ ಒಂದೇ ರೀತಿಯ ಊಟ, ಬಟ್ಟೆ, ಶಿಕ್ಷಣ ಕೊಡುತ್ತೇನೆ. ಕಾಯಿಲೆಯಾದಾಗ ಮಗನಂತೆ ಮಗಳಿಗೂ ಸರಿಯಾದ ಚಿಕಿತ್ಸೆ ಕೊಡಿಸ್ತೇವೆ. ಮಗಳಿಗೆ ಹದಿನೆಂಟಕ್ಕೆ ಮೊದಲು ಮದುವೆ ಮಾಡುವುದಿಲ್ಲ, ವರದಕ್ಷಿಣೆ ಕೇಳುವುದೂ ಇಲ್ಲ, ತೆಗೆದುಕೊಳ್ಳುವದೂ ಇಲ್ಲ, ಹೆಣ್ಣೆಂದು ಹೀಗಳೆಯುವುದೂ ಇಲ್ಲ. ಗಂಡೆಂದು ಅತಿ ಬಿಗುಮಾನವೂ ಇಲ್ಲ... ಸಮಾನವಾಗಿ ಕಾಣುತ್ತೇವೆ.

☺☺☺ (ಮುಕ್ತಾಯ) ☺☺☺

## ನನಗೆ ಮನೆ ಔಷಧಿ



(ಚಿತ್ರ - 15ಎ)

# ಗಂಡು - ಹೆಣ್ಣು ಇಬ್ಬರ ಆರೋಗ್ಯಕ್ಕೂ ಔಷಧಿ ಅಗತ್ಯ




(ಚಿತ್ರ - 15ಬಿ)

ಮುದ್ರಕರು:- ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳು, ಸಶಾಮು.ತುಮಕೂರು, ಕಾಸೂ. 271- 85,000 ಪುಸ್ತಕಗಳು ದಿ: 24-12-2002.

